# ಶ್ರೀಶಂಕರಮಹಾಮನನ



ಪ್ರಕಾಶಕರು .
ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ.
1995

ಅಧ್ಯಾತ್ಮಗ್ರಂಥಾವಳಿ

# ಶ್ರೀಶಂಕರಮಹಾಮನನ

ಶಾಂಕರಸಿದ್ಧಾಂತದ ಸಾರಸಂಗ್ರಹವನ್ನು ತಿಳಿಸುವ ಪ್ರಕರಣ

ಲೇಖಕರು :

ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ ೩೭

ಪ್ರಕಾಶಕರು :

ಅಧ್ಯಾತ್ಮಪ್ರಕಾಶಕಾರ್ಯಾಲಯ,

ಹೊಳೆನರಸೀಪುರ.

೧೯೬೫

# ಬಿನ್ನಹ

ಬ್ರಹ್ಮೀಭೂತ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳು ಶಂಕರವೇದಾಂತವನ್ನು ಅಧ್ಯಯನಮಾಡಲಿಚ್ಛಿಸುವ ಪ್ರಾರಂಭಿಕ ಓದುಗರಿಗಾಗಿ 1930ನೆ ಇಸವಿಯಲ್ಲಿಯೇ ಈ ಗ್ರಂಥವನ್ನು ರಚಿಸಿ ಪ್ರಕಟಿಸಿದ್ದರು. ಅನಂತರ ಅಧ್ಯಾತ್ಮಪ್ರಕಾಶಕಾರ್ಯಾಲಯದವರು ಕ್ರಮವಾಗಿ ಇದರ ಎರಡನೆಯ ಹಾಗೂ ಮೂರನೆಯ ಪುನರ್ಮುದ್ರಣಗಳನ್ನು 1953 ಹಾಗೂ 1974 ರಲ್ಲಿ ಹೊರತಂದರು. ಪ್ರತಿಗಳಿಲ್ಲ ಮಾರಾಟವಾದ್ದರಿಂದ ಈಗ ನಾಲ್ಕನೆಯಬಾರಿಗೆ ಮತ್ತೊಮ್ಮೆ ಮುದ್ರಿಸಿ ಹೊರತರಲಾಗಿದೆ.

ಈ ಗ್ರಂಥವು ಆಕಾರದಲ್ಲಿ ತೀರ ಚಿಕ್ಕದಾದರೂ ಶಾಂಕರಪ್ರಸ್ಥಾನತ್ರಯ ಭಾಷ್ಯಗಳಲ್ಲಿರುವ ಮುಖ್ಯಪ್ರಮೇಯಗಳನ್ನೆಲ್ಲ ಸಂಗ್ರಹವಾಗಿ ಒಳಗೊಂಡಿದೆ. ಈ ಗ್ರಂಥವನ್ನು ಓದಿದ ವಾಚಕರು ಮುಂದೆ ಇದೇ ಗ್ರಂಥಕರ್ತರ (೧) ಶಾಂಕರವೇದಾಂತಪ್ರಕ್ರಿಯೆ (೨) ಶಾಂಕರವೇದಾಂತದಮೂಲತತ್ತ್ವಗಳು (೩) ಶಂಕರತತ್ತ್ವ (೪) ಶಂಕರವೇದಾಂತಸಾರ–ಈ ಗ್ರಂಥಗಳನ್ನೂ ಓದಿದರೆ ಭಾಷ್ಯಕಾರರ ಉಪದೇಶಗಳ ವಿವರವು ಚೆನ್ನಾಗಿ ಮನದಟ್ಟಾಗಲಿದೆ. ಅನಂತರ ನೇರಾಗಿ ಆಚಾರ್ಯರ ಭಾಷ್ಯಗ್ರಂಥಗಳನ್ನು ವ್ಯಾಸಂಗಮಾಡಬಹುದು.

ಕನ್ನಡಿಗರಿಗೆ ಅಧ್ಯಾತ್ಮವಿದ್ಯೆಯ ತಿರುಳನ್ನು ಸರಳವಾಗಿ ತಿಳಿಸುವ ಇಂಥ ಪುಸ್ತಕಗಳನ್ನು ಮಹಾಜನರು ಓದಿ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

ಇತಿ– ಸಜ್ಜನವಿಧೇಯ,

ಹೊಳೆನರಸೀಪುರ. ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ,

ತಾ|| 15-3-95 ಅಧ್ಯಾತ್ಮಗ್ರಂಥಾವಳಿಯ ಸಂಪಾದಕ.

# ಪೀಠಿಕೆ

ಈ ಚಿಕ್ಕ ಪುಸ್ತಕದಲ್ಲಿ ವೇದಾಂತದ ಪ್ರಕ್ರಿಯೆಯ ಗುಟ್ಟನ್ನೆಲ್ಲ ಶ್ರೀಶಂಕರಭಗವತ್ಪಾದರವರ ಅಮೃತವಾಣಿಯ ಆಧಾರದಿಂದಲೇ ಹೊರಗೆಡವಿರುತ್ತದೆ. ಆಚಾರ್ಯರು ಇಲ್ಲಿ ಹೇಳಿರುವ ವಿಷಯಗಳನ್ನು ತಮ್ಮ ಯಾವ ಗ್ರಂಥಗಳಲ್ಲಿ ಅಪ್ಪಣೆಕೊಡಿಸಿರುವರೆಂಬುದನ್ನು ತಿಳಿಯಬೇಕೆನ್ನುವವರಿಗೋಸ್ಕರ ಆಯಾ ಭಾಷ್ಯಗಳ ಅಧ್ಯಾಯಾದಿಗಳ ಸಂಖ್ಯೆಯನ್ನು ತೋರಿಸಿರುತ್ತದೆ. ಬ್ರಹ್ಮಸೂತ್ರ, ಉಪನಿಷತ್ತುಗಳು, ಭಗವದ್ಗೀತೆ – ಎಂಬ ಪ್ರಸ್ಥಾನತ್ರಯಾದಿ ಭಾಷ್ಯಗಳಲ್ಲಿ ಭಗವತ್ಪಾದರವರು ಇದೇ ವಿಷಯಗಳನ್ನೇ ಸಂದರ್ಭವು ಬಂದಾಗಲೆಲ್ಲ ಮತ್ತೆಮತ್ತೆ ಹೇಳಿರುವದರಿಂದ ಕೆಲವು ಸ್ಥಳಗಳನ್ನು ಮಾತ್ರ ಇಲ್ಲಿ ತೋರಿಸಿರುತ್ತದೆ. ಈ ಗ್ರಂಥದಲ್ಲಿ ಆಚಾರ್ಯರ ಮಾತುಗಳನ್ನೇ ಅಕ್ಷರಶಃ ಕೊಟ್ಟಿರುವದಿಲ್ಲ; ಆಯಾ ಅಭಿಪ್ರಾಯಗಳನ್ನುಮಟ್ಟಿಗೆ ತೆಗೆದುಕೊಂಡು ಬೇರೆ ಮಾತುಗಳಲ್ಲಿ ಬರೆದಿರುತ್ತದೆ.

ಹೊಸದಾಗಿ ಓದುವವರಿಗೆ ವೇದಾಂತದ ಒಟ್ಟು ಉಪದೇಶವನ್ನೂ ಮೊದಲೇ ಓದಿರುವವರಿಗೆ ಅನುಸಂಧಾನಕ್ಕೆ ತಕ್ಕ ಸಂಗ್ರಹವನ್ನೂ ಒದಗಿಸುವ ಈ ಪುಸ್ತಕವು ಕೆಲವರಿಗಾದರೂ ಪ್ರಯೋಜನವನ್ನುಂಟುಮಾಡೀತೆಂದು ನಂಬಿರುವೆನು.

ಗ್ರಂಥಕರ್ತ.

# ಪಾರಿಭಾಷಿಕಶಬ್ದಗಳ ಅನುಕ್ರಮಣಿಕೆ

**ಸೂಚನೆ : ಇಲ್ಲಿ ಕೊಟ್ಟಿರುವ ಸಂಖ್ಯೆಗಳು**

**ಆಯಾ ಗ್ರಂಥಭಾಗದ ಸಂಖ್ಯೆಗಳು**

# ಸಂಕೇತಗಳ ವಿವರ



ಉಪ. ಗ. ಉಪದೇಶಸಾಹಸ್ರಿ, ಗದ್ಯಭಾಗ (ಪ್ಯಾರಾಸಂಖ್ಯೆಯನ್ನು ಕೊಟ್ಟಿದೆ),

ಮಾಂ. ಕಾ. ಗೌಡಪಾದರವರು ಬರೆದಿರುವ ಮಾಂಡೂಕ್ಯಕಾರಿಕೆಯ ಭಾಷ್ಯ (ಸಂಖ್ಯೆಗಳನ್ನು ಪ್ರಕರಣ, ಕಾರಿಕೆ—ಹೀಗೆ ಕ್ರಮವಾಗಿ ಕೊಟ್ಟಿದೆ.)

ಗೀ. ಭಾ. ಭಗವದ್ಗೀತಾಭಾಷ್ಯ (ಅಧ್ಯಾಯಶ್ಲೋಕಗಳ ಸಂಖ್ಯೆಯನ್ನು ಕ್ರಮವಾಗಿ ಕೊಟ್ಟಿದೆ.)

ಬೃ. ಭಾ. ಬೃಹದಾರಣ್ಯಕೋಪನಿಷತ್ತಿನ ಭಾಷ್ಯ (ಅಧ್ಯಾಯ. ಬ್ರಾಹ್ಮಣ, ಮಂತ್ರ—ಹೀಗೆ ಕೊಟ್ಟಿದೆ.

ಅ. ಭಾ. ಮುನ್ನುಡಿ, ಬ್ರಹ್ಮಸೂತ್ರಭಾಷ್ಯದ ಪ್ರಾರಂಭದಲ್ಲಿರುವ ಅಧ್ಯಾಸ ಭಾಷ್ಯ.

ಮಾಂ. ಭಾ. ಮಾಂಡೂಕ್ಯೋಪನಿಷತ್ತಿನ ಭಾಷ್ಯ (ಇದಕ್ಕೆ ಮಂತ್ರಸಂಖ್ಯೆ ಕೊಟ್ಟಿದೆ.)

ಮುಂ. ಭಾ. ಮುಂಡಕೋಪನಿಷತ್ತಿನ ಭಾಷ್ಯ (ಮುಂಡಕ, ಖಂಡ, ಮಂತ್ರ— ಈ ಸಂಖ್ಯೆಗಳನ್ನು ಕ್ರಮವಾಗಿ ಹಾಕಿದೆ.)

ಸೂ. ಭಾ. ಬ್ರಹ್ಮಸೂತ್ರ ಶಾಂಕರಭಾಷ್ಯ (ಸಂಖ್ಯೆಗಳು ಕ್ರಮವಾಗಿ ಅಧ್ಯಾಯ, ಪಾದ, ಸೂತ್ರ—ಇವುಗಳನ್ನು ಸೂಚಿಸುತ್ತವೆ.)



॥ ಓಂ ॥

# ಶ್ರೀ ಶಂಕರಮಹಾಮನನ

—o—

೧. ಬ್ರಹ್ಮವಿದ್ಯೆಯೆಂದರೆ ಬ್ರಹ್ಮವನ್ನು ಅರಿತುಕೊಳ್ಳುವದು. ಬ್ರಹ್ಮದ ನಿಜವಾದ ಸ್ವರೂಪವನ್ನು ಅರಿತುಕೊಳ್ಳುವದೇ ಪರಮಪುರುಷಾರ್ಥವು. ಮನುಷ್ಯನಿಗೆ ಬೇಕಾದವುಗಳಲ್ಲೆಲ್ಲ ಇದೇ ಹೆಚ್ಚಿನದು. ಬ್ರಹ್ಮವನ್ನು ಕಂಡುಕೊಂಡರೆ ಜನರಿಗೆ ಉಂಟಾಗಿರುವ ಸಕಲ ಅನರ್ಥಗಳೂ ಹುಟ್ಟಡಗಿಹೋಗುತ್ತವೆ. (೧-೧-೧)

೨. ಬ್ರಹ್ಮವೆಂದರೆ ಎಂದೆಂದಿಗೂ ಇರತಕ್ಕದ್ದಾಗಿಯೂ ಪರಿಶುದ್ಧವಾಗಿಯೂ ಜ್ಞಾನಸ್ವರೂಪವಾಗಿಯೂ ಯಾವ ಬಂಧಕ್ಕೂ ಒಳಪಡದ ಸ್ವರೂಪವುಳ್ಳದ್ದಾಗಿಯೂ ಇರುವ ವಸ್ತು. ಇದು ಅರಿಯದ ವಸ್ತುವಿಲ್ಲ, ಎಲ್ಲವನ್ನೂ ಅರಿಯುತ್ತದೆ; ಅದರಲ್ಲಿಲ್ಲದ ಶಕ್ತಿಯಿಲ್ಲ, ಎಲ್ಲಾ ಬಗೆಯ ಶಕ್ತಿಗಳೂ ಇವೆ. (೧-೧-೧;)

೩. ನಮ್ಮೆದುರಿಗಿರುವ ಪ್ರಪಂಚದಲ್ಲಿ ಬಗೆಬಗೆಯ ಹೆಸರಿನಿಂದಲೂ ಬಗೆಬಗೆಯ ರೂಪಗಳಿಂದಲೂ ಕೂಡಿರುವ ಪದಾರ್ಥಗಳು ಗೋಚರವಾಗುತ್ತಿರುವವು; ಬಗೆಬಗೆಯ ಕರ್ಮಗಳನ್ನು ಮಾಡಿ ಅವುಗಳ ಫಲವನ್ನು ಅನುಭವಿಸುತ್ತಿರುವ ಲೆಕ್ಕವಿಲ್ಲದಷ್ಟು ಜೀವರು ಇರುವರು; ಜೀವರು ಮಾಡುವ ಕರ್ಮಗಳಿಗೆ ಇಂಥ ಸ್ಥಳದಲ್ಲಿ ಇಂಥ ಕಾಲದಲ್ಲಿ ಇಂಥ ನಿಮಿತ್ತದಿಂದಲೇ ಫಲವಾಗಬೇಕೆಂಬ ನಿಯಮವಿರುವದು. ಇದನ್ನು ಯಾರು ಹೇಗೆ ಮಾಡಿರಬಹುದೆಂದು ಮನಸ್ಸಿನಲ್ಲಿ ಆಲೋಚಿಸುವದಕ್ಕೆ ಕೂಡ ಆಗುವಹಾಗಿಲ್ಲ. ಇಂಥ ಈ ಪ್ರಪಂಚವು ತೋರಿ ಅಡಗುವದಕ್ಕೆ ಆಧಾರವಾಗಿರುವದೇ ಬ್ರಹ್ಮವು. (೧-೧-೨;)

೪. ಈ ಬ್ರಹ್ಮವು ಯಾರೂ ಕಾಣದ ಎಲ್ಲಿಯೋ ಇರುವ ವಸ್ತುವಲ್ಲ. ನಮ್ಮೆಲ್ಲರ ಸ್ವರೂಪವೇ ಆಗಿರುವದು. ನಮ್ಮ ನಿಜವಾದ ಸ್ವರೂಪಕ್ಕೆ ಆತ್ಮನೆಂದು ಹೆಸರು. ಹೀಗೆ ನಮ್ಮಗಳ ಆತ್ಮನೇ ಬ್ರಹ್ಮವಾಗಿರುವದರಿಂದ

ಆತ್ಮವಿದ್ಯೆಯೇ ಬ್ರಹ್ಮವಿದ್ಯೆಯು. ಆತ್ಮನನ್ನು ಅರಿತುಕೊಂಡರೆ ಬ್ರಹ್ಮವನ್ನು ಅರಿತುಕೊಂಡಂತೆಯೇ ಆಯಿತು. (೧-೧-೧ ; ಮಾಂ. ೨)

೫. ರೋಗದಿಂದ ನರಳುತ್ತಿರುವಾತನಿಗೆ ಅದು ವಾಸಿಯಾದರೆ ಆವನು ಮೊದಲಿದ್ದ ತನ್ನ ಆರೋಗ್ಯಸ್ಥಿತಿಯನ್ನೇ ಹೊಂದುವನಲ್ಲವೆ ? ಇದರಂತೆ ಸಂಸಾರದುಃಖವನ್ನು ಅನುಭವಿಸುತ್ತಿರುವ ನಮ್ಮಗಳಿಗೆ ನಮ್ಮ ಆತ್ಮನು ಬ್ರಹ್ಮವೆಂದೂ ಇದು ಯಾವಾಗಲೂ ಇರುವ, ಶುದ್ಧವಾದ, ಸಂಸಾರದ ಕಟ್ಟಿಗೆ ಒಂದಿಷ್ಟೂ ಒಳಪಡದ, ಚೈತನ್ಯಮಾತ್ರವಾಗಿರುವದೆಂದೂ ಅರಿವು ಉಂಟಾಗುತ್ತಲೂ ಎಲ್ಲಾ ದುಃಖವೂ ತೊಲಗಿ ನಮ್ಮ ಸ್ವಭಾವದ ಸ್ಥಿತಿಯು ಬರುವದು. ಇದೇ ಬ್ರಹ್ಮವಿದ್ಯೆಯ ಪ್ರಯೋಜನವು. (ಮಾಂ.೧)

೬. ನಮ್ಮ ಆತ್ಮನಲ್ಲಿಲ್ಲದ ಸುಖದುಃಖಗಳನ್ನು ಅದರಲ್ಲಿ ಹುಟ್ಟು ಗಟ್ಟುತ್ತಾ ಅದಕ್ಕೆ ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ-ಇವುಗಳು ಗಂಟುಬಿದ್ದಿರುವವೆಂದು ತಿಳಿಯುವದೇ ಅವಿದ್ಯೆಯು ; ನಮ್ಮ ಆತ್ಮನು ನಿತ್ಯಶುದ್ಧನಾಗಿರುವನೆಂದೂ ಅವನಿಗೆ ಮತ್ತೊಂದು ವಸ್ತುವಿನ ಸೋಂಕು ಒಂದಿಷ್ಟೂ ಇಲ್ಲವೆಂದೂ ಅಂಥ ಸೋಂಕು ಇರುವದು ಆಗುವ ಮಾತಲ್ಲವೆಂದೂ ನಿರ್ಧರಿಸುವದು ವಿದ್ಯೆಯು. (ಅ.ಭಾ.)

೭. 'ನಾನು ಇದೇನೆ' ಎಂದು ಪ್ರತಿಯೊಬ್ಬನೂ ತಿಳಿದುಕೊಂಡಿರುತ್ತಾನೆ ; 'ನಾನು ಇಲ್ಲ' ಎಂಬ ತಿಳಿವಳಿಕೆಯು ಯಾರಿಗೂ ಬರುವದಾಗಿಲ್ಲ. ಈ 'ನಾನು' ಎಂಬ ವಸ್ತುವಿನ ನಿಜವಾದ ಸ್ವರೂಪವನ್ನು ತಿಳಿಯಬೇಕು. ಈ ಸ್ವರೂಪವೇ, ಎಂದರೆ ಆತ್ಮನೇ ಬ್ರಹ್ಮವು. ಆದಕಾರಣ ಬ್ರಹ್ಮವೆಂಬ ವಸ್ತು ಇದೆಯೊ ಇಲ್ಲವೊ ?-ಎಂಬ ಸಂಶಯಕ್ಕೇನೂ ಕಾರಣವಿಲ್ಲ. (೧-೧-೧)

೮. 'ನಾನು' ಎಂಬ ವಸ್ತುವಿದೆ ಎಂಬ ವಿಷಯದಲ್ಲಿ ಯಾರಿಗೂ ಸಂದೇಹವಿಲ್ಲವಾದರೂ 'ನಾನು' ಎಂಬ ವಸ್ತು ಯಾವದು ?- ಎಂಬ ವಿಷಯದಲ್ಲಿ ಒಬ್ಬೊಬ್ಬರ ತಿಳಿವಳಿಕೆಯು ಒಂದೊಂದು ಬಗೆಯಾಗಿರುವದು. ನಮ್ಮ ಶರೀರದಲ್ಲಿ ಚೈತನ್ಯವೆಂಬ ಅರಿವಿನ ಗುಣವುಂಟೆಂದೂ ಈ ಚೈತನ್ಯದಿಂದೊಡಗೂಡಿದ ಶರೀರವೇ ನಮ್ಮ ಆತ್ಮನೆಂದೂ ಕೆಲವರು ಭಾವಿಸಿರು

ತ್ತಾರೆ. ಈ ಚೈತನ್ಯವು ಇಂದ್ರಿಯುಗಗಲ್ಲಿರುವದೆಂದೂ ಆದ್ದರಿಂದ ಇಂದ್ರಿಯ ಗಳ ಗುಂಪೇ ಆತ್ಮನೆಂದೂ ಕೆಲವರು ನಂಬಿರುತ್ತಾರೆ. ಯಾವ ಮನಸ್ಸಿಗೆ ಹೊರಗಿನ ಪ್ರಪಂಚವೆಲ್ಲವೂ ತೋರುವದೋ ಅದೇ ನಮ್ಮ ಆತ್ಮನೆಂದು ಮತ್ತೆ ಕೆಲವರು ತಿಳಿದಿರುತ್ತಾರೆ. ಮನಸ್ಸಿನಲ್ಲಿ ಆಗುತ್ತಿರುವ ವಿಜ್ಞಾನಗಳ ಧಾರೆಯೇ ನಮ್ಮ ಆತ್ಮನೆಂದು ಮತ್ತೆ ಕೆಲವರು ಹೇಳುತ್ತಾರೆ. ಆತ್ಮ ನೆಂಬುದೇ ನಿಜವಾಗಿ ಇರುವದಿಲ್ಲವೆಂದು ಇನ್ನೂ ಕೆಲವರು ಅಭಿಪ್ರಾಯ ಪಟ್ಟಿರುತ್ತಾರೆ. ದೇಹ, ಇಂದ್ರಿಯ, ಮನಸ್ಸು, ಬುದ್ಧಿ– ಇವುಗಳೆಲ್ಲಕ್ಕಿಂತಲೂ ಬೇರೆಯಾಗಿರುವ ಜೀವನೊಬ್ಬನಿದ್ದಾನೆಂದೂ ಕರ್ಮಗಳನ್ನು ಮಾಡಿ ಫಲವನ್ನು ಅನುಭವಿಸುತ್ತಿರುವದೇ ಅವನ ನಿಜವಾದ ಸ್ವರೂಪವೆಂದೂ ಬೇರೆ ಕೆಲವರ ನಂಬಿಕೆ. ಜೀವನಿಗೆ ಸುಖದುಃಖಗಳುಂಟಾಗುವದು ನಿಶ್ಚಯ ವಾದರೂ ಅವನು ನಿಜವಾಗಿ ಯಾವ ಕರ್ಮವನ್ನೂ ಮಾಡುವದಿಲ್ಲವೆಂಬುದು ಇನ್ನೂ ಕೆಲವರ ಮತವಾಗಿರುವದು. ಸಂಸಾರಿಯಾದ ಜೀವನೊಬ್ಬನೇ ಅಲ್ಲದೆ ಇವನಿಗಿಂತ ಬೇರೆಯಾಗಿ ಈಶ್ವರನೆಂಬ ಒಬ್ಬ ಆತ್ಮನಿರುವನೆಂದೂ ಅವನೇ ಸರ್ವಜ್ಞನೂ ಸರ್ವಶಕ್ತನೂ ಆಗಿರುವನೆಂದೂ ಕೆಲವರ ಅಭಿಪ್ರಾಯ ವಾಗಿರುವದು. ಆದರೆ ಮತ್ತೆ ಕೆಲವರು ಆ ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನೇ ನಮ್ಮ ಆತ್ಮನೆಂದು ಹೇಳುತ್ತಿರುವರು.

ಹೀಗೆ ನಾನೆಂದು ತೋರುತ್ತಿರುವ ವಸ್ತುವಿನ ನಿಜವಾದ ಸ್ವರೂಪವು ಇದೆಯೊ, ಇಲ್ಲವೊ ? ಇದ್ದರೆ ಅದು ದೇಹಾದಿಗಳಲ್ಲಿ ಒಂದೊ, ಅವಕ್ಕಿಂತ ಬೇರೆಯೊ ? ಬೇರೆಯಾದರೆ ಅದು ಸುಖದುಃಖಗಳನ್ನು ಅನುಭವಿಸುತ್ತಿರು ವದೊ, ಇಲ್ಲವೊ ? ಅನುಭವಿಸುವದಾದರೆ ಕರ್ಮವನ್ನು ಮಾಡಿ ಫಲವನ್ನನು ಭವಿಸುತ್ತಿರುವದೊ, ಸುಮ್ಮಸುಮ್ಮನೆ ಸುಖದುಃಖಗಳನ್ನು ಪಡೆಯುತ್ತಿರು ವದೊ ? ಸುಖದುಃಖಗಳನ್ನನುಭವಿಸುತ್ತಿರುವದೆಂದು ಇಟ್ಟುಕೊಳ್ಳುವದಾದರೆ ಯಾವ ಸುಖದುಃಖದ ಗೋಜೂ ಇಲ್ಲದ ಪರಮಾತ್ಮನೊಬ್ಬನು ಉಂಟೊ, ಇಲ್ಲವೊ ? ಇದ್ದರೆ ಜೀವಾತ್ಮನಿಗೂ ಪರಮಾತ್ಮನಿಗೂ ಸಂಬಂಧವೇನು ?– ಎಂಬ ಆರು ಸಂದೇಹಗಳು ವಿಚಾರಕರಿಗೆ ಬರುವ ಸಂಭವವಿದೆ. ಈ ಸಂದೇಹಗಳನ್ನು ನೀಗಿಕೊಳ್ಳದೆ ಯಾವದಾದರೊಂದು ಅಭಿಪ್ರಾಯವನ್ನು

ಸುಮ್ಮನೆ ಇಟ್ಟುಕೊಂಡು ನಡೆದರೆ ಆಗಬೇಕಾದ ಗತಿಯು ಆಗದೆ ಇರುವದಲ್ಲದೆ ಆಗಬಾರದ ಅನರ್ಥವೂ ಆಗಬಹುದು. ಆದ್ದರಿಂದ **ಆತ್ಮವಸ್ತುವನ್ನು ಕುರಿತು ವಿಚಾರಮಾಡುವದು ಅತ್ಯಗತ್ಯವು.** (೧–೧–೧)

೯. "'ನಾನು', 'ನಾನು'–ಎಂದು ಜನರು ವ್ಯವಹಾರಮಾಡುತ್ತಿರುವದು ನಿಜವಾದರೂ 'ನಾನು' ಎಂಬ ಒಂದು ಸತ್ಯವಾದ ವಸ್ತುವೇನೂ ಇರುವದಿಲ್ಲ. ಇದರಂತೆ ಹೊರಗೆ ನಮ್ಮಗಳಿಗೆ ತೋರುತ್ತಿರುವ ಪ್ರಪಂಚವೂ ವ್ಯವಹಾರದಲ್ಲಿ ಹಾಗೆ ತೋರುತ್ತಿರುವದೇ ಹೊರತು ಚೆನ್ನಾಗಿ ವಿಚಾರಿಸಿದರೆ ಅದಕ್ಕೆ ಯಾವದಾದರೊಂದು ಸ್ವರೂಪವೂ ಇದೆ ಎಂದು ಪ್ರಮಾಣದಿಂದ ತೋರಿಸುವದಕ್ಕಾಗುವದಿಲ್ಲ. ಆದ್ದರಿಂದ ಜೀವರು, ಜಗತ್ತು, ಈಶ್ವರ–ಎಂಬ ವ್ಯವಹಾರವು ಬರಿಯ ಭ್ರಮೆ. ಇದೇ ವಾಸನೆಯಿಂದ ಯೋಚಿಸಿ ಯೋಚಿಸಿ ಪ್ರಪಂಚವೊಂದಿದೆ, ಜೀವರನೇಕರು ಇದ್ದಾರೆ, ಈಶ್ವರನೊಬ್ಬನು ಉಂಟು– ಎಂದು ಜನರು ಆಡಿಕೊಳ್ಳುತ್ತಿರುವರೇ ಹೊರತು ಪರಮಾರ್ಥವಾಗಿ ಯಾವದೊಂದು ವಸ್ತುವೂ ಇರುವದಿಲ್ಲ. ಯುಕ್ತಿಗೆ ಹೊಂದದೆ ಕಾಣುತ್ತಿರುವದೇ ಜಗತ್ತಿನ ಲಕ್ಷಣವು" ಹೀಗೆಂದು ಕೆಲವರು ವಾದಿಗಳು ಹೇಳುತ್ತಿದ್ದರು. ಇವರಿಗೆ **ಶೂನ್ಯವಾದಿಗಳು** ಎಂದು ಹೆಸರು.

ಈ ವಾದವು ಜನರ ಅನುಭವಕ್ಕೆ ವಿರುದ್ಧವಾಗಿರುತ್ತದೆ. ಯಾವದೊಂದು ಪರಮಾರ್ಥವೂ ಇಲ್ಲದಿದ್ದರೆ ಹೀಗೆಲ್ಲ ತೋರಬೇಕಾದದ್ದೇನು ? ತೋರುವದು ತೋರುತ್ತಿರುವದರಿಂದಲೇ ಸತ್ಯವು ಎಂದು ನಂಬುವದು ಯೋಗ್ಯವಾಗಿರಲು ಅದನ್ನು ಭ್ರಾಂತಿಯೆಂದು ಹೇಳುವದಕ್ಕೆ ಕಾರಣವೇನು ? 'ತೋರುತ್ತಿರುವ ಜಗತ್ತು ಯುಕ್ತಿಗೆ ಹೊಂದುವದಿಲ್ಲವಾದ್ದರಿಂದ ಭ್ರಾಂತಿಯು ಎನ್ನುವದಕ್ಕಿಂತ ನಮ್ಮ ಯುಕ್ತಿಯು ಅನುಭವದಲ್ಲಿ ತೋರುತ್ತಿರುವದಕ್ಕೆ ಹೊಂದುವದಿಲ್ಲವಾದ್ದರಿಂದ ತಪ್ಪಾಗಿರಬೇಕೆನ್ನುವದೇ ಮೇಲಲ್ಲವೆ ? ಆದ್ದರಿಂದ **ಶೂನ್ಯವಾದವು ಪ್ರಮಾಣವಿರುದ್ಧವಾದ** ಮತವು. ಇದನ್ನು ಯಾರೂ ನಂಬಲಾರರಾದ್ದರಿಂದ ಅದನ್ನು ಖಂಡಿಸುವದೂ ಅವಶ್ಯವಿಲ್ಲ. (೨–೨–೩೧)

೧೦. ನಮ್ಮ ಆತ್ಮನೇ ಇಲ್ಲವೆಂದು ಹೇಳುವದು ನಡೆಯುವಮಾತಲ್ಲ ; ಏಕೆಂದರೆ ಆತ್ಮನು ಇಲ್ಲವೆಂದು ಯಾವನು ಹೇಳುವನೋ ಅವನ ಸ್ವರೂಪವೇ

ಆತ್ಮನು (೧-೧-೪). ಆತ್ಮನು ಮತ್ತೊಂದು ಪ್ರಮಾಣದ ಆಧಾರದಿಂದ ಹೊಸದಾಗಿ ಸಿದ್ಧವಾಗಬೇಕಾಗಿರುವ ವಸ್ತುವಲ್ಲ. ಅವನು ಸಿದ್ಧವಾಗಿಯೇ ಇರುವವನು.

ಯಾವದರಿಂದ ಅರಿಯುತ್ತೇವೆಯೋ ಅದು ಪ್ರಮಾಣವು, ಯಾವದನ್ನು ಅರಿಯುತ್ತೇವೆಯೋ ಅದು ಪ್ರಮೇಯವು. ಇದು ಪ್ರಮಾಣವು, ಇದು ಪ್ರಮೇಯವು. ಎಂಬ ವ್ಯವಹಾರವು ಉಂಟಾಗುವದಕ್ಕೆ ಮೊದಲು ಆತ್ಮನು ಬೇಕಾಗುವದು. ಏಕೆಂದರೆ ಆತ್ಮನು ಪ್ರಮಾಣಗಳಿಂದ ಪ್ರಮೇಯವನ್ನು ಅರಿಯುವವನು. ಪ್ರಮಾಣಗಳಿಂದ ಪ್ರಮೇಯವನ್ನು ಅರಿಯುವಾತನೇ ಇಲ್ಲವೆಂದರೆ ಪ್ರಮಾಣಪ್ರಮೇಯವೆಂಬ ವ್ಯವಹಾರವೇ ಸುಳ್ಳಾಗಬೇಕಾಗುವದು. ಅದೂ ಆಗಲಿ ಎಂದರೆ ಶೂನ್ಯವಾದವು ಸರಿ ಎಂದಂತೆ ಆಗುತ್ತದೆ. ಆದರೆ ಶೂನ್ಯವಾದವು ಅನುಭವವಿರುದ್ಧವಾದದ್ದು ; ಏಕೆಂದರೆ ಸರ್ವವೂ ಶೂನ್ಯವು ಎಂದು ನಿರ್ಧರಿಸುವದಕ್ಕೂ ಆತ್ಮನು ಬೇಕಾಗಿರುತ್ತದೆ. (೨-೩-೭)

೧೧. ಪ್ರಮಾಣವು ಎರಡು ಬಗೆಯಾಗಿರುತ್ತದೆ. ಜನರೆಲ್ಲರೂ ಸಾಮಾನ್ಯವಾಗಿ ಉಪಯೋಗಿಸುತ್ತಿರುವ ಪ್ರತ್ಯಕ್ಷ, ಅನುಮಾನ-ಮುಂತಾದವುಗಳು ಲೌಕಿಕಪ್ರಮಾಣಗಳು ; ಲೌಕಿಕಪ್ರಮಾಣಕ್ಕೆ ನಿಲುಕದೆ ಇರುವ ವಸ್ತುಗಳನ್ನು ತಿಳಿಸುವ ಶಾಸ್ತ್ರವು ಅಲೌಕಿಕಪ್ರಮಾಣವು. ಈ ಎರಡು ಬಗೆಯ ಪ್ರಮಾಣಗಳಿಗೆ ನಿಲುಕುವ ವಸ್ತುಗಳೆಲ್ಲ ಪ್ರಮೇಯಗಳೆನಿಸುವವು. ಆದರೆ ಆತ್ಮನು ಯಾವ ಪ್ರಮಾಣವನ್ನೂ ಬಯಸದೆ, ಪ್ರಮಾಣವ್ಯವಹಾರಕ್ಕೆ ತಾನೇ ಜೀವಕಳೆಯನ್ನು ಕೊಡುತ್ತಿರುವದರಿಂದ ಇವನು ಅಪ್ರಮೇಯ-ಎಂದತೆ ಪ್ರಮೇಯನಲ್ಲ-ಎಂದೂ ಸ್ವತಃಸಿದ್ಧ-ಎಂದರೆ ಪ್ರಮಾಣಗಳ ಬಯಕೆಯಿಲ್ಲದೆ ತಾನೇ ಪ್ರಸಿದ್ಧನಾಗಿರುವವನು-ಎಂದು ತಿಳಿದವರು ಹೇಳುವರು. (೨-೩-೭, ಗೀ. ೨-೧೮)

೧೨. ಆತ್ಮನು ದೇಹಕ್ಕಿಂತ ಬೇರೆಯಾಗಿರುವದಿಲ್ಲವೆಂದೂ ದೇಹವಿದ್ದಾಗಲೇ ಅರಿವು ತೋರುವದರಿಂದ ಚೈತನ್ಯವು ದೇಹದ ಧರ್ಮವೆಂದೂ ಕೆಲವರು ತಿಳಿದಿರುತ್ತಾರೆ. ಇದು ಸರಿಯಲ್ಲ, ಏಕೆಂದರೆ ಜ್ಞಾನಕ್ಕೆ ದೇಹವು

ವಿಷಯವಾಗಿರುತ್ತದೆ. ಯಾವದು ಬೆಳಗುವದೋ ಅದು ವಿಷಯಿ; ಅದು ಯಾವದನ್ನು ಬೆಳಗುವದೋ ಅದು ವಿಷಯ. ಜ್ಞಾನವು ದೇಹವೇ ಮುಂತಾದವುಗಳನ್ನು ಅರಿಯುವದರಿಂದ ಜ್ಞಾನವು ವಿಷಯಿ, ದೇಹಾದಿಗಳು ವಿಷಯ. ವಿಷಯಿಯು ವಿಷಯದ ಧರ್ಮವಾಗಲಾರದು; ದೀಪವು ತಾನು ತೋರಿಸುವ ಗಡಿಗೆಯ ಧರ್ಮವಲ್ಲ. ದೇಹದಲ್ಲಿರುವ ಧರ್ಮಗಳು ತಮ್ಮ ತಮ್ಮ ಸ್ವರೂಪವನ್ನಾಗಲಿ ಒಂದು ಮತ್ತೊಂದು ಧರ್ಮವನ್ನಾಗಲಿ ಅರಿಯಲಾರವು; ಜ್ಞಾನವು ದೇಹವನ್ನೂ ಅದರ ಎಲ್ಲಾ ಧರ್ಮಗಳನ್ನೂ ಅರಿಯುತ್ತದೆ. ಆದ್ದರಿಂದಲೂ ಜ್ಞಾನವೆಂಬುದು ದೇಹದ ಧರ್ಮವಲ್ಲ. ಇದಲ್ಲದೆ ದೇಹವಿದ್ದರೆ ಮಾತ್ರ ಜ್ಞಾನವುಂಟಾಗುವದೆಂಬ ನಿಯಮವೇನೂ ಇರುವದಿಲ್ಲ; ಸ್ವಪ್ನದಲ್ಲಿ ಈ ದೇಹವು ಇಲ್ಲದಿದ್ದರೂ ಜ್ಞಾನವುಂಟಾಗುತ್ತಿರುವದು ಎಲ್ಲರಿಗೂ ಗೊತ್ತಿರುವ ಮಾತು, ಆದ್ದರಿಂದ ದೇಹಕ್ಕಿಂತಲೂ ಜ್ಞಾನವು ಬೇರೆಯೇ. ಜ್ಞಾನವನ್ನೇ ಚೈತನ್ಯವೆಂದೂ ಕರೆಯುವರು. ಇದೇ ಆತ್ಮನು. ೩-೩-೫೪)

೧೩. ಆತ್ಮನು ಇಂದ್ರಿಯಾದಿಗಳನ್ನೂ ಅರಿಯುತ್ತಿರುವದರಿಂದ, ವಿಷಯವಾದ ಇಂದ್ರಿಯಗಳ ಧರ್ಮವೇ ಆತ್ಮನು ಎಂಬವರ ಮಾತು ಅನುಭವವಿರುದ್ಧವಾಗಿರುವದು. 'ಇದನ್ನು ಮೂಸಿ ನೋಡುತ್ತೇನೆ' ಎಂಬ ವ್ಯವಹಾರದಲ್ಲಿ ವಾಸನೆಯನ್ನು ಅರಿಯುವವನು ಆತ್ಮನು, ಮೂಗಿನ ಇಂದ್ರಿಯವು ವಾಸನೆಯನ್ನು ತಿಳಿಸುವದಕ್ಕೆ ಸಾಧನವು. ಕರ್ತೃವು ಕರಣಕ್ಕಿಂತ ಬೇರೆಯಾಗಿರಬೇಕಲ್ಲವೆ? ಕಣ್ಣು, ಕಿವಿ– ಮುಂತಾದವುಗಳಲ್ಲಿರುವ ಇಂದ್ರಿಯಗಳು ಆಯಾ ವಿಷಯವನ್ನು ತಿಳಿಸುವ ಕರಣಗಳು. ಅವುಗಳ ಸಹಾಯದಿಂದ ಅರಿಯುವ ಚೈತನ್ಯವೇ ಆತ್ಮನು. ಆದ್ದರಿಂದ ಆತ್ಮನು ಇಂದ್ರಿಯಾದಿಗಳಿಗಿಂತ ಬೇರೆಯೇ. (೨–೩–೧೮)

೧೪. ಆತ್ಮನು ದೇಹಕ್ಕಿಂತಲೂ ಇಂದ್ರಿಯಗಳಿಗಿಂತಲೂ ಬೇರೆಯಾಗಿರುವಂತೆ ಮನಸ್ಸಿಗಿಂತಲೂ ಬೇರೆಯೇ ಆಗಿರುವನು. ಗಾಢನಿದ್ರೆಯಲ್ಲಿ ದೇಹವಿರುವದಿಲ್ಲ, ಇಂದ್ರಿಯಾದಿಗಳಿರುವದಿಲ್ಲ, ಮನಸ್ಸಿರುವದಿಲ್ಲ. (೧–೧–೯, ೨–೩–೪೦) ಆಗ ಯಾವ ಜ್ಞಾನವೂ ಇಲ್ಲದ್ದರಿಂದ ಆತ್ಮನೂ ಇಲ್ಲವೆನ್ನಬೇಕ

ಲ್ಲವೆ ? —ಎಂದರೆ ನಿದ್ರೆಯಲ್ಲಿ ತನಗಿಂತ ಎರಡನೆಯದಾದ ವಸ್ತುವಿಲ್ಲದ್ದರಿಂದ ವಿಶೇಷಜ್ಞಾನವಿಲ್ಲವೇ ಹೊರತು ತಾನು ಇಲ್ಲದ್ದರಿಂದಲ್ಲ. (ಬೃ. ೪-೩-೨೩) 'ನಾನು' ಎಂಬ ಜ್ಞಾನವೂ ಇಲ್ಲದ್ದರಿಂದ ಆಗ ಆತ್ಮನೂ ಇಲ್ಲವೆಂಬುದೇ ಸರಿಯೆಂದು ತೋರುವದಲ್ಲ !— ಎಂದರೆ 'ಸುಷುಪ್ತಿಯಲ್ಲಿ ಏನೂ ತೋರುವದಿಲ್ಲ' ಎಂಬುದೂ ಒಂದು ಅನುಭವವೇ. ಆ ಅನುಭವವೇ ಚೈತನ್ಯರೂಪವಾದ ಆತ್ಮನು. 'ನಾನು', 'ಇದು' ಎಂಬ ರೀತಿಯ ತಿಳಿವಳಿಕೆಗೆ ವಿಶೇಷಜ್ಞಾನವೆಂದು ಹೆಸರು ; ಅದು ಆತ್ಮನಿಗಿಂತ ಬೇರೆಯಾದ ವಸ್ತುಗಳು ಇರುವಾಗಮಟ್ಟಿಗೆ ತೋರುವದು. ಆದ್ದರಿಂದ 'ನಿದ್ರೆಯಲ್ಲಿ ನನಗೆ ಏನೂ ತಿಳಿಯಲಿಲ್ಲ' ಎಂಬ ಅನುಭವದಿಂದ ಆಗ ಎರಡನೆಯ ವಸ್ತುವೇ ಇರಲಿಲ್ಲವೆಂದು ಸಿದ್ಧವಾಗುವದು. ಹಾಗಿಲ್ಲದೆ ನಿದ್ರೆಯಲ್ಲಿ ತಾನೇ ಇರಲಿಲ್ಲವೆಂದೇ ಪಟ್ಟುಹಿಡಿಯುವದಾದರೆ ನಿದ್ರೆಯೆಂಬ ಅವಸ್ಥೆಯೇ ಇಲ್ಲವೆಂದು ಹೇಳಿದಂತಾಗುವದು ; ಇದು ಲೋಕಾನುಭವಕ್ಕೆ ವಿರುದ್ಧವಾಗುವದು. ಆದ್ದರಿಂದ **ಆತ್ಮನು ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ**— ಇವುಗಳೆಲ್ಲಕ್ಕಿಂತಲೂ ಬೇರೆಯಾದ ಚೈತನ್ಯಸ್ವರೂಪವುಳ್ಳವನೆಂದು ಗಾಢನಿದ್ರೆಯ ಅನುಭವದಿಂದ ನಿರ್ಣಯಿಸಬೇಕಾಗುತ್ತದೆ. (ಉಪ. ಗ. ೨)

೧೫. ಆತ್ಮನು ಕರ್ತೃಭೋಕ್ತೃರೂಪವಾಗಿರುವನೊ, ಇಲ್ಲವೊ ? ಕರ್ಮಗಳನ್ನು ಮಾಡಿ ಫಲವನ್ನು ಪಡೆದು ಅನುಭವಿಸುವದೆಂಬುದು ನಮ್ಮಗಳ ಆತ್ಮನ ಸ್ವಭಾವವೊ, ಅಲ್ಲವೊ?—ಎಂದರೆ ಇದಕ್ಕೆ ಎರಡು ಉತ್ತರಗಳಿರುವವು ; ಒಂದು ದೃಷ್ಟಿಯಿಂದ ಕರ್ತೃತ್ವವೂ ಭೋಕ್ತೃತ್ವವೂ ಆತ್ಮನಿಗೆ ಉಂಟು, ಮತ್ತೊಂದು ದೃಷ್ಟಿಯಿಂದ ಇಲ್ಲ. ಬಾಚಿ ಮುಂತಾದ ಆಯುಧಗಳನ್ನುಪಯೋಗಿಸುತ್ತಿರುವಾಗ ಮಾತ್ರ ಮನುಷ್ಯನು ಬಡಗಿಯೆನ್ನಿಸುವನು, ಇಲ್ಲದಿದ್ದರೆ ಎಲ್ಲರಂತೆ ಮನುಷ್ಯನಾಗಿರುವನು. ಅದರಂತೆ ಶರೀರೇಂದ್ರಿಯಗಳನ್ನು ಕೂಡಿಕೊಂಡಿರುವ ಎಚ್ಚರಕನಸುಗಳಲ್ಲಿ ಆತ್ಮನಲ್ಲಿ ಕರ್ತೃತ್ವವೂ ಭೋಕ್ತೃತ್ವವೂ ಇರುವದು ; ನಿದ್ರೆಯಲ್ಲಿ ಯಾವ ಸಾಧನವೂ ಇಲ್ಲದ್ದರಿಂದ ಆಗ ಆತ್ಮನು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ಒಟ್ಟಿನಲ್ಲಿ

ನೋಡಿದರೆ **ಕರ್ಮವನ್ನು ಮಾಡಿ ಫಲವನ್ನು ಅನುಭವಿಸುವದೆಂಬುದು ಆತ್ಮನ ಸ್ವಭಾವಕ್ಕೆ ಹತ್ತಿದ್ದಲ್ಲವೆಂದು ಹೇಳಬೇಕು.** (೨-೩-೪೦)

೧೬. ಆತ್ಮನಲ್ಲಿ ಕರ್ತೃತ್ವವು ಇರುವಾಗ ನಾವುಗಳೇ ಕರ್ಮವನ್ನು ಮಾಡುವೆವೊ, ಅಥವಾ ನಮ್ಮನ್ನು ಕೆಲಸಕ್ಕೆ ಹಚ್ಚುವ ಪರಮೇಶ್ವರನೊಬ್ಬನು ಬೇರೆ ಇರುವನೊ ? ನಾವು ಕರ್ಮಫಲವನ್ನು ಅನುಭವಿಸುವಾಗ ಕರ್ಮದಿಂದಲೇ ಫಲವು ಬರುವದೊ, ಫಲವನ್ನು ಕೊಡುವ ಈಶ್ವರನೊಬ್ಬನಿದಾನೊ ?– ಎಂದು ಸಂಶಯವು ಬರುವದು. ಆಂಥ ಈಶ್ಸರನೊಬ್ಬನು ಉಂಟು ; ಶರೀರ, ಇಂದ್ರಿಯ– ಮುಂತಾದವುಗಳೇ ತಾನೆಂದು ತಿಳಿದು ಅವಿದ್ಯೆಯೆಂಬ ಕಣ್ಣುಪರೆಯಿಂದ ಮುಂಗಾಣದೆ ಇರುವವನು **ಜೀವನು** ; ಜೀವರ ಕರ್ಮಕ್ಕೆ ಅಧ್ಯಕ್ಷನಾಗಿ ಸಕಲಪ್ರಾಣಿಗಳಲ್ಲಿಯೂ ಇದ್ದುಕೊಂಡು ಸಾಕ್ಷಿಯಾಗಿಯೂ ಚೈತನ್ಯರೂಪನಾಗಿಯೂ ಇರುವವನು ಈಶ್ವರನು. **ಜೀವನು ಮಾಡುತ್ತಿರುವ ಧರ್ಮಾಧರ್ಮಗಳೂ ಅವುಗಳ ಫಲವೂ ಈಶ್ವರನ ಅನುಗ್ರಹದಿಂದಲೇ ನಡೆಯುವವು.** (೨-೩-೪೧, ೪೨ ; ೩-೨-೩೮ ; ಗೀ. ೧೩-೨೨ ; ಮುಂ. ೩-೧-೧).

೧೭. ಕರ್ಮವನ್ನು ಮಾಡಿ ಫಲವನ್ನು ಅನುಭವಿಸುವ ಜೀವನಿಗೂ ಈಶ್ವರನಿಗೂ ಸಂಬಂಧವೇನು ? ಎಂದರೆ ಜೀವನೇ ಈಶ್ವರನು. ದೇಹಾದಿಗಳೇ ನಾವೆಂದು ತಪ್ಪಾಗಿ ತಿಳಿದಿರುವತನಕ ಈಶ್ವರನು ಜೀವರಾದ ನಮಗಿಂತ ಬೇರೆಯಾಗಿರುವನು. ನಿಜವನ್ನು ಅರಿತರೆ ಜೀವತ್ವವೇ ಇರುವದಿಲ್ಲ. ಏಕೆಂದರೆ **ಈಶ್ವರನು ಯಾವಾಗಲೂ ನಮ್ಮ ಪರಮಾತ್ಮನು, ಎಂದರೆ ಪರಮಾರ್ಥವಾದ ನಮ್ಮ ಸ್ವರೂಪವು.** (ಗೀ. ೧೩-೨, ಗೀ.೧೬-೨೨, ಗೀ, ೧೫-೧೯)

೧೮. ಜೀವನು ನಿಜವಾಗಿ ಪರಮಾತ್ಮನೇ ಎಂಬ ವಿಷಯದಲ್ಲಿ ಅನೇಕ ಸಂಶಯಗಳು ಬರುವವು. ಜೀವನು ಹುಟ್ಟುತ್ತಲೂ ಸಾಯುತ್ತಲೂ ಇರುವನು ; ಇವನು ಹುಟ್ಟುಸಾವುಗಳಿಲ್ಲದೆ ಇರುವ ಪರಮಾತ್ಮನೆಂದು ಹೇಳುವದು ಸರಿಯೆ ?–ಎಂಬುದು ಮೊದಲನೆಯ ಸಂಶಯವು.

ಆದರೆ ಚೆನ್ನಾಗಿ ನೋಡಿದರೆ ಜೀವನು ನಿಜವಾಗಿ ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ. ಶರೀರವು ಹುಟ್ಟುತ್ತದೆ, ಸಾಯುತ್ತದೆ. ಹಳೆಯ ಬಟ್ಟೆಯನ್ನು ತೆಗೆದುಹಾಕಿ ಹೊಸ ಬಟ್ಟೆಯನ್ನು ಉಟ್ಟುಕೊಂಡಮಾತ್ರಕ್ಕೆ ಮನುಷ್ಯನು ಬೇರೆಯಾಗುವನೆ ? ಇಲ್ಲ. ಇದರಂತೆ ಶರೀರವು ಹುಟ್ಟಿದರೆ ಜೀವನು ಹುಟ್ಟಿದಹಾಗಲ್ಲ, ಶರೀರವು ಬಿದ್ದುಹೋದರೆ ಜೀವನು ಸತ್ತಂತೆಯೂ ಅಲ್ಲ. (ಗೀ. ೨-೨೨)

೧೯. ಜೀವನಿಗೆ ಶರೀರ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರ– ಇವುಗಳೆಲ್ಲ ಗಂಟುಬಿದ್ದಿರುವವು. ಹೀಗಿರುವಾಗ ಇವನು ಯಾವ ಶರೀರವೂ ಇಲ್ಲದ ಪರಮಾತ್ಮನು ಹೇಗಾದಾನು ?– ಎಂಬುದು ಎರಡನೆಯ ಸಂಶಯವು.

ಸರಿಯಾಗಿ ನೋಡಿದರೆ ಜೀವನಿಗೆ ಶರೀರಾದಿಗಳು ಇವೆ ಎಂಬುದಕ್ಕೆ ಪ್ರಮಾಣವಿಲ್ಲ. ಶರೀರಾದಿಗಳೆಲ್ಲ ವಿಷಯವಾಗಿವೆ, ತಾನು ವಿಷಯಿಯಾಗಿರುತ್ತಾನೆ. ವಿಷಯಿಯಾದ ತನ್ನಲ್ಲಿ ವಿಷಯವಾದ ಶರೀರಾದಿಗಳ ಸಂಬಂಧವು ಇದೆ ಎಂದು ತಿಳಿಯುವದು ನ್ಯಾಯವಾಗಲಾರದು. ಒಂದು ಗಡಿಗೆಯು ನಮ್ಮ ಜ್ಞಾನಕ್ಕೆ ವಿಷಯವಾಗಬಹುದಷ್ಟೆ ; ಆಗ ಗಡಿಗೆಯೇ ನಮ್ಮ ಸ್ವರೂಪವೆಂದಾಗಲಿ ಗಡಿಗೆಯು ನಮಗೆ ಸಂಬಂಧಪಟ್ಟಿರುವದೆಂದಾಗಲಿ ನಾವು ತಿಳಿಯುವದಿಲ್ಲ. ಇದರಂತೆ ಶರೀರಾದಿಗಳು ನಮಗೆ ಸೇರಿರುವವು ಎಂಬುದಕ್ಕೆ ಪ್ರಮಾಣವಿಲ್ಲ. ಶಾಸ್ತ್ರದಲ್ಲಿ ಆತ್ಮನು ಅಶರೀರನು ಎಂದೂ ಹೇಳಿರುತ್ತದೆ. (ಕ. ೧-೨-೨೨, ಗೀ. ಭಾ. ೧೩-೧೪)

೨೦. ಜೀವಾತ್ಮನಿಗೆ ದೇಹವೇ ಮುಂತಾದವುಗಳು ಸಹಜವಾಗಿರುವವೆಂದು ಭಾವಿಸುವದೂ ತಪ್ಪೇ. ಏಕೆಂದರೆ ಸ್ವಪ್ನದಲ್ಲಿ ಈ ದೇಹಾದಿಗಳು ಯಾವವೂ ಇರುವದಿಲ್ಲ. ಅಲ್ಲಿ ಬರಿಯ ಮಾಯಿಕದೇಹಾದಿಗಳಿಂದಲೇ ವ್ಯವಹಾರವು ಸಾಗುವದು. ಎಚ್ಚರಕ್ಕೂ ಸ್ವಪ್ನಕ್ಕೂ ಯಾವ ಭೇದವನ್ನೂ ತೋರಿಸುವದಕ್ಕೆ ಆಗುವಹಾಗಿಲ್ಲವಾದ್ದರಿಂದಲೂ ಇದು ಎಚ್ಚರ, ಇದು ಸ್ವಪ್ನವು ಎಂದು ವಿಂಗಡಿಸಿ ಅರಿಯುವದಕ್ಕೇ ಬರುವಹಾಗಿಲ್ಲವಾದ್ದರಿಂದಲೂ ಎಚ್ಚರದ ದೇಹಾದಿಗಳೆಂಬವೂ ಮಾಯಿಕವೇ. ಈ ಮಾಯಿಕದೇಹಾದಿ

ಗಳ ಸಂಬಂಧವು ಆತ್ಮನಿಗೆ ಇರುವದೆಂದು ಹೇಳುವದಕ್ಕೆ ಆಗುವದೇ ಇಲ್ಲ. (ಸೂ. ಭಾ. ೩-೨-೩, ಕಾ. ೫-೪, ಕಠ. ೫-೧೧)

೨೧. ಜೀವರು ಅನೇಕರಿರುವರು; ಅವರೆಲ್ಲರೂ ತಮಗೆ ದೇಹಾದಿಗಳು ಇರುವವೆಂದು ಒಪ್ಪಿರುವರು. ಒಬ್ಬ ಜೀವನು ತನಗೆ ಕನಸಿನಲ್ಲಿ ಬೇರೆ ಮಾಯಿಕದೇಹಾದಿಗಳು ಉಂಟೆಂದು ತಿಳಿದಮಾತ್ರಕ್ಕೆ ಎಲ್ಲರೂ ಒಪ್ಪಿರುವ ಎಚ್ಚರದ ಶರೀರಾದಿಗಳು ಜೀವರಿಗೆ ಇಲ್ಲವೆನ್ನುವದು ಹೇಗೆ? ಅನೇಕರಾದ ಜೀವರು ಒಬ್ಬನಾದ ಪರಮಾತ್ಮನಾಗಿರುವದು ಹೇಗೆ?– ಎಂಬುದು ಮೂರನೆಯ ಸಂಶಯವು.

ಆದರೆ ಸ್ವಪ್ನದಲ್ಲಿಯೂ ಎಚ್ಚರದಂತೆ ಅನೇಕ ಕರ್ತೃಭೋಕ್ತೃಗಳಾದ ಜೀವರೂ ಇರುವಂತೆಯೂ ಅವರೆಲ್ಲರೂ ಒಟ್ಟಿಗೆ ವ್ಯವಹಾರಮಾಡುತ್ತಿರುವಂತೆಯೂ ಕಾಣುತ್ತಿರುವದಲ್ಲ! ಆದಮಾತ್ರದಿಂದ ಅಲ್ಲಿ ತೋರುವ ಜೀವರೂ ಅವರ ಶರೀರಾದಿಗಳೂ ಸತ್ಯವಾದವುಗಳೆಂದು ನಾವು ತಿಳಿಯುತ್ತೇವೆಯೆ? ಇಲ್ಲ. ಅದರಂತೆಯೇ ಎಚ್ಚರದಲ್ಲಿ ಅನೇಕಜೀವರನ್ನೂ ಅವರ ಶರೀರಾದಿಗಳನ್ನೂ ಅರಿಯಬೇಕು. ಕನಸಿನಲ್ಲಿ ಒಬ್ಬ ಆತ್ಮನೇ ಇದ್ದರೂ ಅನೇಕರಿರುವಂತೆ ತೋರುವ ಹಾಗೆ ಎಚ್ಚರದಲ್ಲಿಯೂ ತೋರುತ್ತಿರುವದೆಂದು ತಿಳಿಯಬೇಕು. (ಸೂ.ಭಾ.೨-೧-೨೮, ಮಾಂ.ಕಾ.೪-೩೭)

೨೨. ಮಾಯಿಕವಾದ ದೇಹಾದಿಗಳ ಸಂಬಂಧವಾದರೂ ಜೀವನಿಗೆ ಇದ್ದೇ ಇರುವದಷ್ಟೆ? ಎಂದರೆ ಅದೂ ಆತ್ಮನಿಗೆ ಸ್ವಭಾವವಲ್ಲ. ಆತ್ಮನು ದೇಹವೇ ಮುಂತಾದವುಗಳ ಸಂಬಂಧವನ್ನು ಸಂಪೂರ್ಣವಾಗಿ ಕೈಬಿಟ್ಟು ಸ್ವಾಭಾವಿಕವಾದ ಬ್ರಹ್ಮಸ್ಥಿತಿಯಲ್ಲಿಯೇ ಇರುವದು ಗಾಢನಿದ್ರೆಯಲ್ಲಿ ನಮ್ಮೆಲ್ಲರ ಅನುಭವದಲ್ಲಿದೆ; ಮತ್ತು ಪ್ರಯತ್ನದಿಂದ ಸಮಾಧಿಯನ್ನು ಪಡೆದಾಗಲೂ ಈ ಬ್ರಹ್ಮಸ್ವರೂಪವನ್ನು ಕಾಣಬಹುದೆಂದು ಶಾಸ್ತ್ರಗಳಲ್ಲಿ ಹೇಳಿರುತ್ತದೆ. (ಸೂ.ಭಾ. ೩-೨-೭, ೩-೨-೨೪)

೨೩. ನಿದ್ರೆಯಲ್ಲಾಗಲಿ ಸಮಾಧಿಯಲ್ಲಾಗಲಿ 'ನಾನು ಬ್ರಹ್ಮವಾಗಿದೇನೆ' ಎಂಬ ಜ್ಞಾನವುಂಟಾಗಿರುವದಿಲ್ಲ; 'ನನಗೆ ಆಗ ಏನೊಂದೂ

ತಿಳಿಯಲಿಲ್ಲ' ಎಂದೇ ಎಚ್ಚತ್ತಮೇಲೆ ತೋರುತ್ತದೆ. ಆದ್ದರಿಂದ ನಿದ್ರೆಯ ಲ್ಲಾಗಲಿ ಸಮಾಧಿಯಲ್ಲಾಗಲಿ ಜೀವನಿಗೆ ಅಜ್ಞಾನವೇ ಇದೆ ಎಂದಂತಾಯಿತು. ಇಂಥ ಜೀವನು ಸರ್ವಜ್ಞನಾದ ಬ್ರಹ್ಮವೆಂಬುದು ಹೇಗೆ ?- ಎಂಬುದು ನಾಲ್ಕನೆಯ ಸಂಶಯವು.

ಆದರೆ ನಿದ್ರೆಯಲ್ಲಿ 'ನಾನು ಇಂಥವನು' ಎಂದು ತಿಳಿಯದಿರು ವದಕ್ಕೆ ತಾನೊಬ್ಬನೇ ಇರುವದೇ ಕಾರಣವೇ ಹೊರತು ಅಲ್ಲಿ ಅಜ್ಞಾನ ವಿರುವದು ಕಾರಣವಲ್ಲ; ಏಕೆಂದರೆ 'ನಾನು ಏನೂ ಅರಿಯಲಿಲ್ಲ"- ಎಂದರೆ ಎರಡನೆಯ ವಸ್ತು ತೋರಲಿಲ್ಲವೆಂದರ್ಥವೇ ಹೊರತು ತನ್ನ ಅರಿವಿನ ಸ್ವರೂಪವೂ ಇರಲಿಲ್ಲವೆಂದಾಗುವದಿಲ್ಲ. 'ಇದು ಇಂಥದ್ದು' ಎಂಬ ಬಿಡಿಯ ಅರಿವು ನಿದ್ರೆಯಲ್ಲಿರುವದಿಲ್ಲವೆಂಬುದೇನೋ ನಿಜ; ಆದರೆ ಆಗ ಇಂದ್ರಿಯ ಗಳು ಇಲ್ಲದಿರುವದೇ ಬಿಡಿಯರಿವು ಆಗದಿರುವದಕ್ಕೆ ಕಾರಣವೇ ಹೊರತು ಆತ್ಮಸ್ವರೂಪವಾದ ಅರಿವು ಇಲ್ಲದ್ದು ಕಾರಣವಲ್ಲ. (ಬೃ. ೪-೩-೨೧; ೪-೩-೨೩)

೨೪. ಜೀವನಿಗೆ ಎಚ್ಚರಕನಸುಗಳಲ್ಲಿ ದೇಹವೇ ಮುಂತಾದವುಗಳ ಸಂಬಂಧವಿದೆ, ನಿದ್ರೆಯಲ್ಲಿಲ್ಲ. ಹೀಗೆ ದೇಹಾದಿಗಳ ಸಂಬಂಧವನ್ನು ಪಡೆಯುತ್ತಲೂ ಬಿಡುತ್ತಲೂ ಇರುವವನನ್ನು ನಿತ್ಯಮುಕ್ತನೆನ್ನಬಹುದೆ?- ಎಂಬುದು ಐದನೆಯ ಸಂಶಯವು.

ದೇಹಾದಿಗಳು ಪರಮಾರ್ಥವಾಗಿ ಇಲ್ಲವೇ ಇಲ್ಲವೆಂದೂ ಎಚ್ಚರ ದಲ್ಲಿಯೂ ಕನಸಿನಲ್ಲಿಯೂ ಅವು ಇರುವಂತೆ ತೋರುವವೆಂದೂ ಎಲ್ಲಾ ಅವಸ್ಥೆಗಳನ್ನೂ ಆತ್ಮನು ಸಾಕ್ಷಿಯಾಗಿ ನೋಡುತ್ತಿರುವನೆಂದೂ ಹಿಂದೆಯೇ ಹೇಳಿರುತ್ತದೆ. ಆತ್ಮಚೈತನ್ಯವು ಯಾವಾಗಲೂ ಬೇರ್ಪಡದೆ ಒಂದೇ ರೂಪದಲ್ಲಿರುವದರಿಂದಲೂ ಮಾಯಿಕವಾದ ದೇಹಾದಿಗಳಿಂದ ಯಾವ ಹೆಚ್ಚು ಕಡಿಮೆಗಳೂ ಆತ್ಮಚೈತನ್ಯದಲ್ಲಿ ಕಂಡುಬಂದಿರುವದಿಲ್ಲವಾದ್ದರಿಂದಲೂ ಆತ್ಮನು ನಿತ್ಯಮುಕ್ತನೆನ್ನುವದಕ್ಕೆ ಯಾವ ಪ್ರತಿಬಂಧಕವೂ ಇರುವದಿಲ್ಲ. (ಮಾಂ. ೭; ಮಾಂ. ಕಾ. ೨-೩೨)

೨೫. ಜೀವನು ಪರಮಾತ್ಮನ ಅಂಶನೆಂದು ಶಾಸ್ತ್ರದಲ್ಲಿದೆಯಲ್ಲ! ಶಾಸ್ತ್ರಪ್ರಮಾಣವನ್ನು ಮೀರಿ ಜೀವನೇ ಪರಮಾತ್ಮನೆಂದು ತಿಳಿಯಬಹುದೆ? ಎಂಬುದು ಆರನೆಯ ಸಂಶಯವು.

ಆದರೆ ಶಾಸ್ತ್ರವೆಂಬುದೂ ಪ್ರತ್ಯಕ್ಷಾದಿಗಳಂತೆ ಪ್ರಮಾಣವಾಗಿರುತ್ತದೆ ಯಾದ್ದರಿಂದ ಪ್ರಮಾಣದ ಸ್ವಭಾವವನ್ನು ಇಟ್ಟುಕೊಂಡೇ ಇರುತ್ತದೆ. ಪ್ರಮಾಣವೆಂದರೆ ಇದ್ದದ್ದನ್ನು ಇದ್ದಂತೆ ತಿಳಿಸುವ ಸಾಧನವು; ಯಾವ ಸಾಧನವಿಲ್ಲದೆ ನಮಗೆ ಒಂದು ವಿಷಯವು ತಿಳಿಯುವದಿಲ್ಲವೋ ಅದೇ ಆ ವಿಷಯದಲ್ಲಿ ಪ್ರಮಾಣವೆನಿಸುವದು. ಪ್ರಮಾಣವು ಇದ್ದದ್ದನ್ನು ತಿಳಿಸು ತ್ತದೆಯೇ ಹೊರತು ಇಲ್ಲದ್ದನ್ನು ಹುಟ್ಟಿಸುವದಿಲ್ಲ. ಶಾಸ್ತ್ರವು ಆತ್ಮವಿಷಯ ದಲ್ಲಿ ಪ್ರಮಾಣವಾಗಿರುತ್ತದೆ. ಇದು ಆತ್ಮನ ವಿಷಯದಲ್ಲಿ ನಮಗೆ ಸಂಶಯ ವಾಗಲಿ ಅಜ್ಞಾನವಾಗಲಿ ತಪ್ಪುತಿಳಿವಳಿಕೆಯಾಗಲಿ ಉಂಟಾಗದಂತೆ ತಿಳಿಸಿದರೆ ಪ್ರಮಾಣವಾಗುವದೇ ಹೊರತು ಅನುಭವವಿರುದ್ಧವಾಗಿ ಹೇಳಿದರೆ ಎಂದಿಗೂ ಪ್ರಮಾಣವಾಗಲಾರದು. ನಮ್ಮಗಳ ಆತ್ಮನು ಬ್ರಹ್ಮ ಸ್ವರೂಪವೆಂಬುದು ಅನುಭವಸಿದ್ಧವಾಗಿಯೂ ಇದೆ; ಆತ್ಮನೇ ಬ್ರಹ್ಮ ವೆಂದು ಶಾಸ್ತ್ರದಲ್ಲಿ ಹೇಳಿಯೂ ಇದೆ. ಅನುಭವವಿರುದ್ಧವಾಗಿರುವ ವಾಕ್ಯಕ್ಕೆ ಯಾವ ಪ್ರಾಮಾಣ್ಯವೂ ಬರಲಾರದು. (ಬೃ. ೨-೧-೨೦, ಗೀ. ೧೮-೬೬)

೨೬. ಹಾಗಾದರೆ ಜೀವನು ಪರಮಾತ್ಮನ ಅಂಶವೆಂದು ಶ್ರುತಿ ಯಲ್ಲಿಯೂ ಸ್ಮೃತಿಯಲ್ಲಿಯೂ ಹೇಳಿದೆಯಲ್ಲ! ಆ ವಾಕ್ಯಗಳಿಗೆ ಏನು ಗತಿ? ಎಂದು ಕೇಳಬಹುದು. 'ಜೀವನು ಪರಮಾತ್ಮನ ಅಂಶವು' ಎಂದರೆ ಸೂರ್ಯನ ಪ್ರತಿಬಿಂಬವು ಸೂರ್ಯನ ಅಂಶವಾಗಿರುವಂತೆಯೂ ಬೆಂಕಿಯ ಕಿಡಿಗಳು ಕೆಂಡದ ಅಂಶವಾಗಿರುವಂತೆಯೂ ಗಡಿಗೆಯ ಒಳಗಿನ ಬಯಲು ಒಟ್ಟುಬಯಲಿನ ಅಂಶವಾಗಿರುವಂತೆಯೂ ಅಂಶವಾಗಿರುವನು, ಅದೇ ಜಾತಿಗೆ ಸೇರಿದವನು- ಎಂದರ್ಥ. ಪ್ರತಿಬಿಂಬಗಳು ಅನೇಕವಾಗಿದ್ದರೂ ಬಿಂಬವು ಒಂದೇ ಆಗಿರುವಂತೆ ನೋಡುವದಕ್ಕೆ ಜೀವರು ಅನೇಕರಾಗಿದ್ದರೂ ಅವರೆಲ್ಲರ ಆತ್ಮನು ನಿಜವಾಗಿ ಒಬ್ಬನೇ; ಜೀವರೂ ಸ್ವರೂಪದಲ್ಲಿ

ಚೈತನ್ಯವೇ ; ಕಿಡಿಗಳೂ ಕೆಂಡವೂ ಒಂದೇ ಆಗಿರುವಂತೆ ಜೀವರೂ ಬ್ರಹ್ಮವೂ ಚೈತನ್ಯವೇ ಆಗಿರುವರು. ಗಡಿಗೆಯ ಬಯಲು, ಮನೆಯ ಬಯಲು– ಮುಂತಾಗಿ ಅನೇಕ ಬಯಲುಗಳು ವ್ಯವಹಾರದಲ್ಲಿದ್ದರೂ ನಿಜವಾಗಿ ಬಯಲು ಒಂದೇ ಆಗಿರುವಂತೆ ಜೀವರುಗಳು ಅನೇಕರೆಂದು ವ್ಯವಹಾರವಿದ್ದರೂ ಅವರ ಸ್ವರೂಪವಾದ ಬ್ರಹ್ಮವು ಒಂದೇ. ಹೀಗೆಂದು ತಿಳಿಸುವದೇ ಅಂಶವಾಕ್ಯಗಳ ಉದ್ದೇಶವು. (ಸೂ. ಭಾ. ೨–೨–೪೩, ೨–೩–೪೦, ೩–೨–೧೮ ; ಬೃ. ೨–೧–೨೦, ಕಾ. ೨–೨–೯)

೨೭. ಜೀವನು ಪರಮಾತ್ಮನ ಅಂಶವೆಂದು ಹೇಳುವ ವಾಕ್ಯಗಳಿಗೆ ವಾಚ್ಯಾರ್ಥವನ್ನೇ ಇಟ್ಟುಕೊಂಡರೆ ಏನು ತಪ್ಪಾಗುವದು ? ಎಂದರೆ, ಆಗ ಅಂಶವೆಂಬ ಶಬ್ದಕ್ಕೆ ಅವಯವವೆಂದೋ ವಿಕಾರವೆಂದೋ ಶಕ್ತಿಯೆಂದೋ ಅವಸ್ಥೆಯೆಂದೋ ಅರ್ಥವನ್ನು ಹೇಳಬೇಕಾಗುವದು. ಪರಮಾತ್ಮನಲ್ಲಿ ಅನೇಕ ಭಾಗಗಳಿರುವವೆಂದೂ ಅವುಗಳಲ್ಲಿ ಒಂದೊಂದೂ ಜೀವವೆಂದೂ ಕಲ್ಪಿಸಿದರೆ, ಅನುಮನಗಳು ಸೇರಿಕೊಂಡಾಗ ಮಾತ್ರ ಅವಯವಿಯು ಇದ್ದುಕೊಂಡು ಅವುಗಳು ಬಿಟ್ಟುಕೊಂಡ ಕೂಡಲೆ ಅವನು ನಾಶವಾಗುವಂತೆ ಪರಮಾತ್ಮನಿಗೆ ನಾಶವು ಆಗುವದೆಂದು ಹೇಳಬೇಕಾಗುವದು. ಇದು ಒಪ್ಪುವ ಮಾತಲ್ಲ. ಆದ್ದರಿಂದ ಜೀವನು ಪರಮಾತ್ಮನ ಅವಯವವಲ್ಲ. ಇದರಂತೆ ಜೀವನು ಪರಮಾತ್ಮನ ವಿಕಾರವು ಎಂದರೆ ಮಣ್ಣು ಮಾರ್ಪಟ್ಟು ಗಡಿಗೆಯಾಗಿರುವಂತೆ ಪರಮಾತ್ಮನು ಮಾರ್ಪಟ್ಟು ಜೀವನಾಗಿರುವನು ಎಂದು ಆಗುವದು. ಆಗಲೂ ಪರಮಾತ್ಮನಿಗೆ ನಾಶವನ್ನು ಒಪ್ಪಿದಂತೆ ಆಗುವದು. ಆದ್ದರಿಂದ ಜೀವನು ಆತ್ಮನ ವಿಕಾರವೂ ಅಲ್ಲ. ಸರ್ವಶಕ್ತನಾದ ಈಶ್ವರನು ಬಂಧಕ್ಕೆ ಒಳಗಾಗುವನೆಂಬುದು ಸರಿಯಲ್ಲವಾದ್ದರಿಂದ ಜೀವನು ಈಶ್ವರನ ಶಕ್ತಿಯೆಂಬುದೂ ಒಪ್ಪುವದಿಲ್ಲ. ಪರಮಾತ್ಮನು ಮೊದಲು ಪರಿಶುದ್ಧನಾಗಿ ದುಃಖಹೀನನಾಗಿರುವನೆಂದೂ ಆಮೇಲೆ ಅಶುಚಿಯಾದ ದುಃಖಮಯವಾದ ಸಂಸಾರವನ್ನು ಹೊಂದುವನೆಂದೂ ಹೇಳುವದು ಒಪ್ಪುವ ಮಾತಲ್ಲವಾದ್ದರಿಂದ ಜೀವನು ಪರಮಾತ್ಮನ ಅವಸ್ಥೆಯೆಂದರೂ ಒಪ್ಪುವದಿಲ್ಲ. ಆದ್ದರಿಂದ 'ಜೀವನು ಪರಮಾತ್ಮನ ಅಂಶವು' ಎಂಬ

ವಾಕ್ಯಕ್ಕೆ ಅಕ್ಷರಾರ್ಥವನ್ನು ಇಟ್ಟುಕೊಳ್ಳುವದಕ್ಕೆ ಬರುವಹಾಗಿಲ್ಲ. (ಬೃ. ೩-೮-೧೨)

೨೮. ಇದನ್ನು ಮಾಡಬೇಕು, ಇದನ್ನು ಬಿಡಬೇಕು- ಎಂದು ಶಾಸ್ತ್ರದಲ್ಲಿ ಜೀವನಿಗೆ ಚಿತ್ತಶುದ್ಧಿಯಾಗಬೇಕೆಂದು ಕರ್ಮಗಳನ್ನು ಹೇಳಿರುತ್ತದೆ; ಈಶ್ವರನ ಅನುಗ್ರಹವನ್ನು ಸಂಪಾದಿಸುವದಕ್ಕೆಂದು ಉಪಾಸನೆಯನ್ನು ಹೇಳಿರುತ್ತದೆ; ಮೋಕ್ಷವನ್ನು ಪಡೆಯುವದಕ್ಕೆ ಅನುಕೂಲವಾಗಲೆಂದು ಜ್ಞಾನವನ್ನು ಹೇಳಿರುತ್ತದೆ; ಜೀವನೇ ಬ್ರಹ್ಮವಾದರೆ ಈ ಸಾಧನಗಳೆಲ್ಲ ವ್ಯರ್ಥವಾಗುವದಲ್ಲ? ಎಂಬುದು ಏಳನೆಯ ಸಂಶಯವು.

ಇದಕ್ಕೆ ಪರಿಹಾರವೇನೆಂದರೆ : **ಶಾಸ್ತ್ರದಲ್ಲಿ ಮೋಕ್ಷಕ್ಕೆ ಜ್ಞಾನವನ್ನು ಸಾಧನವೆಂದು ಹೇಳಿರುವದರಿಂದ ಬಂಧವೆಲ್ಲ ಅಜ್ಞಾನದಿಂದ ಆಗಿರುವದೆಂದೇ ಸಿದ್ಧವಾಗುವದು**; ಏಕೆಂದರೆ ಅಜ್ಞಾನವನ್ನು ಕಳೆಯುವದೇ ಜ್ಞಾನದ ಕೆಲಸವೇ ಹೊರತು, ಇಲ್ಲದ್ದನ್ನು ಉಂಟುಮಾಡುವದಲ್ಲ, ದೇಹಾದಿಗಳೇ ತಾವೆಂದು ತಿಳಿಯುವ ಅಜ್ಞರಿಗೆ ಕರ್ಮವನ್ನೂ ಉಪಾಸನೆಯನ್ನೂ ಶಾಸ್ತ್ರದಲ್ಲಿ ಹೇಳಿದ ಮಾತ್ರದಿಂದ ಪರಮಾರ್ಥವಾಗಿ ನೋಡಿದರೆ ಆತ್ಮನು ಬ್ರಹ್ಮವಾಗಿರುವನೆಂಬ ಸಿದ್ಧಾಂತಕ್ಕೆ ಅಡ್ಡಿಯೇನೂ ಇರುವದಿಲ್ಲ. (ಸೂ. ಭಾ. ೧-೧-೪, ೨-೩-೪೮, ಬೃ. ೨-೧-೨೦)

೨೯. ದೇಹಾದಿಗಳ ಸಂಬಂಧದಿಂದಲೇ ಕರ್ಮಾದಿಗಳನ್ನು ವಿಧಿಸಿರಲಿ, ಆದರೂ ದೇಹಾದಿಗಳಂತೂ ಇದ್ದೇ ಇವೆ. ಅವನ್ನು ತಪ್ಪಿಸಿಕೊಳ್ಳುವದಕ್ಕೆ ಆಗುವಹಾಗಿಲ್ಲ; ಆದ್ದರಿಂದ ಈ ದೇಹಾದಿಗಳ ಸಂಬಂಧದಿಂದ ಆಗಿರುವ ಅಜ್ಞಾನವನ್ನೂ ನಾಶಪಡಿಸಿಕೊಳ್ಳುವದಕ್ಕೆ ಉಪಾಯವಿಲ್ಲವಾಯಿತಲ್ಲ! ಎಂದರೆ ಇದಕ್ಕೂ ಉತ್ತರವಿದೆ. ದೇಹಾದಿಗಳು ನಿಜವಾಗಿ ಇರುವದಿಲ್ಲ. ಚೆನ್ನಾಗಿ ವಿಚಾರಿಸಿ ನೋಡಿದರೆ ಆತ್ಮನನ್ನೇ ದೇಹಾದಿಗಳೆಂದು ನಾವು ವ್ಯವಹರಿಸುತ್ತಿದ್ದೇವೆಯೇ ಹೊರತು ಅವುಗಳು ಬೇರೆಯಾಗಿರುವದಕ್ಕೆ ಮತ್ತೆ ಯಾವ ಆಧಾರವೂ ಇರುವದಿಲ್ಲವೆಂದು ಗೊತ್ತಾಗುವದು. ವಸ್ತುಗಳು ಎಚ್ಚರದಲ್ಲಾಗಲಿ ಕನಸಿನಲ್ಲಾಗಲಿ ಆತ್ಮಚೈತನ್ಯಕ್ಕೆ ವಿಷಯವಾಗಿ ಅದರ ವಶದಲ್ಲಿದ್ದು ತೋರಿಕೊಳ್ಳುವವೇ ಹೊರತು ಚೈತನ್ಯವನ್ನು ಬಿಟ್ಟು ಸ್ವತಂತ್ರ

ವಾಗಿ ಯಾವ ವಸ್ತುಗಳೂ ತೋರಿಕೊಂಡ್ದನ್ನು ನಾವರಿಯೆವು. ಸೂರ್ಯನು ಜಗತ್ತನ್ನು ಬೆಳಗುವಂತೆ ದೇಹಾದಿಗಳನ್ನೆಲ್ಲ ಆತ್ಮಚೈತನ್ಯವೇ ಬೆಳಗುತ್ತಿರುವದು. ಸುಷುಪ್ತಿ, ಸಮಾಧಿ- ಮುಂತಾದ ಅವಸ್ಥೆಗಳಲ್ಲಿ ದೇಹಾದಿಗಳೂ ಇರುವದಿಲ್ಲ. ಆದ್ದರಿಂದ ದೇಹಾದಿಗಳೂ ಅವುಗಳ ಸಂಬಂಧವೂ ಅದರಿಂದಾಗುವ ಸಂಸಾರವೂ ಆತ್ಮನಲ್ಲಿ ಪರಮಾರ್ಥ ವಾಗಿರುವದಿಲ್ಲ. (ಬೃ. ೨-೪-೭, ಗೀ. ೧೩-೩೩, ೧೮-೬೦, ೧೮-೬೬)

೩೦. ಬ್ರಹ್ಮವನ್ನು ಉಪಾಸನೆಮಾಡತಕ್ಕದ್ದೆಂದೂ ಆದರಲ್ಲಿ ಸರ್ವ ಕರ್ಮಗಳೂ ಸರ್ವಕಾಮಗಳೂ ಸರ್ವಗಂಧಗಳೂ ಸರ್ವರಸಗಳೂ ಇನ್ನೂ ಅನೇಕ ಧರ್ಮಗಳೂ ಇರುವವೆಂದೂ ಶಾಸ್ತ್ರದಲ್ಲಿ ಹೇಳಿರುತ್ತದೆ. ಉಪಾಸನೆ ಮಾಡುವ ಜೀವನೇ ಬ್ರಹ್ಮವಾದರೆ ತಾನೇ ತನ್ನನ್ನೇ ಉಪಾಸನೆಮಾಡಿ ಕೊಳ್ಳಬೇಕೆಂದಂತೆ ಆಗುವದಲ್ಲ! ಜೀವನಲ್ಲಿ ಬ್ರಹ್ಮದ ಯಾವ ಗುಣಗಳೂ ತೋರುವದಿಲ್ಲವಾದ್ದರಿಂದ ಶಾಸ್ತ್ರಕ್ಕೆ ಪ್ರಾಮಾಣ್ಯವೂ ಇಲ್ಲವಾಗಿಬಿಡುವದಲ್ಲ! ಇದಕ್ಕೇನು ಗತಿ ? ಎಂಬದು ಎಂಟನೆಯ ಸಂಶಯವು.

ಉಪಾಸನೆಯನ್ನು, ಆತ್ಮವಿಚಾರಕ್ಕೆ ಅಸಮರ್ಥರಾಗಿರುವವರೂ ಬಗೆ ಬಗೆಯ ದೃಷ್ಟಾದೃಷ್ಟಫಲಗಳನ್ನು ಬಯಸುವವರೂ ಆದ ಅಜ್ಞರಿಗಾಗಿ ಶಾಸ್ತ್ರದಲ್ಲಿ ಹೇಳಿದೆಯೆಂದು ಹಿಂದೆಯೇ ತಿಳಿಸಿರುತ್ತದೆ. ಯಾವದನ್ನು ಉಪಾಸನೆಮಾಡುತ್ತೇವೋ ಅದು ಬ್ರಹ್ಮವಲ್ಲವೆಂದೂ ದೇಹೇಂದ್ರಿಯ ಮನೋಬುದ್ಧಿಗಳನ್ನು ವಿಷಯಮಾಡಿಕೊಳ್ಳುವ ಚೈತನ್ಯವೇ ಬ್ರಹ್ಮವೆಂದೂ ಶಾಸ್ತ್ರದಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ತಾನು ಉಪಾಸನೆಮಾಡುವ ಬ್ರಹ್ಮವು ತನ್ನ ಸ್ವರೂಪಕ್ಕಿಂತ ಬೇರೆಯೆಂದು ತಿಳಿಯುವದು ಸರಿಯಲ್ಲ ವೆಂದೂ ಶಾಸ್ತ್ರದಲ್ಲಿ ಹೇಳಿದೆ. ಆದ್ದರಿಂದ ಉಪಾಸನೆಯಲ್ಲಿ ಹೇಳಿರುವ ಬ್ರಹ್ಮಸ್ವರೂಪದಲ್ಲಿ ಶಾಸ್ತ್ರಕ್ಕೆ ತಾತ್ಪರ್ಯವಿಲ್ಲ. ಉಪಾಧಿಯ ಧರ್ಮ ಗಳನ್ನೇ ಅಲ್ಲಿ ಬ್ರಹ್ಮದ ಧರ್ಮಗಳೆಂದು ಹೇಳಿರುತ್ತದೆ; ಉಪಾಧಿಗಳೆಲ್ಲ ಬ್ರಹ್ಮದಲ್ಲಿ ಕಲ್ಪಿತವಾಗಿರುವದರಿಂದ ಅವುಗಳನ್ನು ಬ್ರಹ್ಮದ ಧರ್ಮಗಳೆಂದು ಉಪಚಾರಕ್ಕಾಗಿ ಹೇಳಿದೆಯೆಂದು ತಿಳಿಯಬೇಕು. (ಸೂ. ಭಾ. ೩-೨-೧೪, ೧೫; ಬೃ. ೧-೪-೧೦)

೩೧. ಬ್ರಹ್ಮವು ಸಕಲಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದ್ದೆಂದೂ ಬ್ರಹ್ಮವು ಸರ್ವಜ್ಞವೆಂದೂ ಸರ್ವಶಕ್ತವೆಂದೂ ಶಾಸ್ತ್ರದಲ್ಲಿ ಹೇಳಿರುತ್ತದೆ. ಜೀವನಿಂದ ಜಗತ್ತು ಉಂಟಾಗುವದಿಲ್ಲ, ಜೀವನಿಗೆ ಎಷ್ಟೋ ವಿಷಯಗಳು ತಿಳಿಯವು. ಜೀವನಿಗೆ ಮಾಡುವದಕ್ಕಾಗದ ಅನೇಕ ಕೆಲಸಗಳಿವೆ. ಹೀಗಿರುವಾದ ಜೀವನೇ ಬ್ರಹ್ಮವೆಂದು ಹೇಳುವದು ಸರಿಯೆ ? ಎಂಬುದು ಒಂಬತ್ತನೆಯ ಸಂಶಯವು.

ಇದಕ್ಕೆ ಪರಿಹಾರವೇನೆಂದರೆ— ಎಚ್ಚರಕನಸುಗಳಲ್ಲಿ ತೋರುವ ಪ್ರಪಂಚವು ಆಯಾ ಅವಸ್ಥೆಯಲ್ಲಿ ಮಾತ್ರವೇ ತೋರಿಕೊಳ್ಳಬಲ್ಲದು ; ಆಗ ಅದು ಆತ್ಮಚೈತನ್ಯದ ಅಧೀನವಾಗಿಯೇ ತೋರಿಕೊಳ್ಳುವದು. ನಿದ್ರೆಯಲ್ಲಿ ಯಾವ ಜಗತ್ತೂ ಇರುವದಿಲ್ಲ, ಆತ್ಮನಲ್ಲಿಯೇ ಅಡಗಿಬಿಡುವದು. ಆದ್ದರಿಂದ ಆತ್ಮನಲ್ಲಿಯೇ ಜಗತ್ತು ಒಡೆದುಮೂಡಿ ತೋರುತ್ತಿದ್ದು ಅಡಗುವದೆಂದು ಆಯಿತು. ಈ ಕಾರಣದಿಂದ ಸರ್ವಜಗತ್ತುಗಳನ್ನೂ ಸೃಷ್ಟಿಮಾಡುವ ಶಕ್ತಿಯು ಆತ್ಮನಲ್ಲಿದೆ ಎಂದಾಯಿತು. ತೋರುವ ಜಗತ್ತೆಲ್ಲ ಆತ್ಮಚೈತನ್ಯಕ್ಕೆ ವಿಷಯವಾಗಿಯೇ ಇರುವವರಿಂದ ಆತ್ಮನು ಸರ್ವಜ್ಞನೆಂದೂ ಆಯಿತು.

ಆದರೆ ಬ್ರಹ್ಮವು ಜಗತ್ಕಾರಣವೆಂದೂ ಸರ್ವಜ್ಞನೆಂದೂ ಸರ್ವಶಕ್ತಿಗಳುಳ್ಳದ್ದೆಂದೂ ಹೇಳುವದು ಕೂಡ ಅಜ್ಞಾನದ ದೃಷ್ಟಿಯಿಂದಲೇ ಹೊರತು ಪರಮಾರ್ಥವಲ್ಲ ; ಏಕೆಂದರೆ ಬ್ರಹ್ಮಕ್ಕಿಂತ ಬೇರೆಯಾಗಿ ಯಾವ ವಸ್ತುವೂ ಇಲ್ಲವೆಂಬುದೇ ಪರಮಾರ್ಥವು. (ಮಾಂ. ೧೧೬, ಸೂ. ಭಾ. ೨-೧-೧೪, ೨-೧-೭)

೩೨. ಬ್ರಹ್ಮವೊಂದೇ ನಿಜವಾಗಿರುವ ವಸ್ತುವಾದರೆ ಬ್ರಹ್ಮವನ್ನು ಅರಿಯಬೇಕೆನ್ನುವವರು ಬೇರೆ ಇಲ್ಲವೆಂದಾಗುವದು ; ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳು ನಿಜವಾದ ಪ್ರಮಾಣವಲ್ಲವೆಂದಾಗುವದು ; ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳೂ ಉಪಾಸನೆಗಳೂ ವ್ಯರ್ಥವಾಗುವವು ; ಬ್ರಹ್ಮವಿದ್ಯೆಯನ್ನು ಕಲಿಯುವ ಶಿಷ್ಯನಾಗಲಿ ಕಲಿಸುವ ಗುರುಗಳಾಗಲಿ ನಿಜವಾಗಿ ಇಲ್ಲವಾದ್ದರಿಂದ ಜ್ಞಾನಶಾಸ್ತ್ರವೂ ವ್ಯರ್ಥವಾಗುವದು. ಹೀಗೆ ವ್ಯವಹಾರಕ್ಕೆಲ್ಲ ಸೊನ್ನೆಸುತ್ತುವದು ನ್ಯಾಯವೆ? ಎಂಬುದು ಹತ್ತನೆಯ ಸಂಶಯವು.

ಆದರೆ 'ಬ್ರಹ್ಮವೊಂದೇ ನಿಜವಾದರೆ' ಎಂದು ರೆಕಾರವನ್ನು ಪ್ರಯೋಗಿಸುವ ಸಂಶಯಕ್ಕೇ ಮೊದಲು ಕಾರಣವಿಲ್ಲ; ಏಕೆಂದರೆ ಬ್ರಹ್ಮವೊಂದೇ ನಿಜವಾಗಿರುವದೆಂದೂ ಅದೇ ನಮ್ಮಗಳ ಆತ್ಮನೆಂದೂ ಯುಕ್ತ್ಯನುಭವಗಳಿಂದ ಸಿದ್ಧವಾರುತ್ತದೆ. **ಪ್ರತ್ಯಕ್ಷನೇ ಮುಂತಾದ ಪ್ರಮಾಣಗಳು ಎಚ್ಚರದ ಅವಸ್ಥೆಯಲ್ಲಿ ನಡೆಯುವ ವ್ಯವಹಾರಕ್ಕೆ ಸೇರಿದವುಗಳು;** ಅವು ಬ್ರಹ್ಮದ ವಿಷಯವಾಗಿ ಏನೂ ಹೇಳುವದಿಲ್ಲ. ಆದ್ದರಿಂದ ಅವುಗಳಿಗೇನೂ ಬಾಧಕವಿಲ್ಲ. ಶಾಸ್ತ್ರದಲ್ಲಿ ಹೇಳುವ ಕರ್ಮಗಳೂ ಉಪಾಸನೆಗಳೂ ಕ್ರಿಯಾಕಾರಕಗಳಲ್ಲಿ ಸತ್ಯತ್ವಬುದ್ಧಿಯುಳ್ಳ ಅಜ್ಞರಿಗಾಗಿ ಹುಟ್ಟಿವೆಯೆಂದು ಮೊದಲೇ ಹೇಳಿದೆ. (ಬೃ. ೨-೧-೨೦)

೩೩. ಕನಸಿನಲ್ಲಿ ಕಂಡದ್ದು ಎಚರದಲ್ಲಿ ಸುಳ್ಳಾದರೂ ಕನಸಿನಲ್ಲಿ ಸತ್ಯವಾಗಿಯೇ ಇರುವದು. ಇದರಂತೆ **ಜಾನಿಗಳ ದೃಷ್ಟಿಯಿಂದ ಬಂಧವಿಲ್ಲ, ಮೋಕ್ಷವಿಲ್ಲ, ಸಾಧಕನಿಲ್ಲ, ಸಾಧನವಿಲ್ಲ, ಮುಮುಕ್ಷುಗಳಿಲ್ಲ; ಸೃಷ್ಟಿಯಿಲ್ಲ, ಸ್ಥಿತಿಯಿಲ್ಲ, ಪ್ರಲಯವಿಲ್ಲ,.** ಇದನ್ನು ತಿಳಿಸುವದಕ್ಕೆ ಶಾಸ್ತ್ರವೂ ಬೇಕಿರುವದಿಲ್ಲ. ಆಗ ಶಾಸ್ತ್ರವೂ ಶಾಸ್ತ್ರವಲ್ಲ, **ಹೀಗಿದ್ದರೂ** ಅಜ್ಞಾನಿಗಳ **ದೃಷ್ಟಿಯಿಂದ ಇವೆಲ್ಲವೂ ಸತ್ಯವಾಗಿರುವವು.** ಆದ್ದರಿಂದ ಕರ್ಮಗಳಾಗಲಿ, ಶಾಸ್ತ್ರಗಳಾಗಲಿ, ಜ್ಞಾನವಾಗಲಿ ವ್ಯರ್ಥವಾಗುವದಿಲ್ಲ ; ಪ್ರಮಾಣಪ್ರಮೇಯ ವ್ಯವಹಾರವೂ ಜ್ಞಾನವಾಗುವವರೆಗೆ ಸತ್ಯವಾಗಿರುವದು. (ಸೂ. ಭಾ. ೨-೧-೧೪, ಮಾಂ. ಕಾ. ೨-೩೨, ಬೃ. ೨-೧೬೨೦)

೩೪. ಪ್ರಮಾಣಗಳೂ ಶಾಸ್ತ್ರವೂ ಪರಮಾರ್ಥವೆನ್ನಬೇಕೇಹೊರತು ಇವುಗಳು ಅಜ್ಞಾನಿಗಳ ದೃಷ್ಟಿಯಲ್ಲಿ ಸತ್ಯವೆನ್ನುವದು ಸರಿಯಲ್ಲ. ಅಜ್ಞಾನದಲ್ಲಿ ಸತ್ಯವಾದೀತೆ, ಪ್ರಮಾಣವಾದೀತೆ ?- ಎನ್ನುವದು ಹನ್ನೊಂದನೆಯ ಸಂಶಯವು.

ಇದಕ್ಕೆ ಪರಿಹಾರವೇನೆಂದರೆ- ಪ್ರಮಾಣವೆನ್ನುವದು ನಿಜವಾದ ಅನುಭವಕ್ಕೆ ಸಾಧನವು. ಇಂದ್ರಿಯವೇ ಮುಂತಾದವುಗಳು ಇಂಥ ಸಾಧನಗಳಾದ್ದರಿಂದ ಅವೇ ಪ್ರಮಾಣಗಳೆನಿಸಿರುತ್ತವೆ. ಇಂದ್ರಿಯಗಳು ದೇಹವನ್ನು ಅವಲಂಬಿಸಿರುತ್ತವೆ. ದೇಹವನ್ನು ತಾನೆಂದಾಗಲಿ ತನ್ನದೆಂದಾಗಲಿ ತಿಳಿಯ

ದವನು ಪ್ರಮಾತೃವಾಗಲಾರನು. ಪ್ರಮಾತೃವೆಂದರೆ ಪ್ರಮಾಣಗಳನ್ನು ಪಯೋಗಿಸಿ ವಿಷಯದ ನಿಜವನ್ನು ಅರಿಯಲೆಳಸುವವನು. ಆದರೆ ಆತ್ಮನಲ್ಲಿ ದೇಹವಾಗಲಿ ಇಂದ್ರಿಯವಾಗಲಿ ನಿಜವಾಗಿಲ್ಲದ್ದರಿಂದ ಅವನು ನಿಜವಾಗಿ ಪ್ರಮಾತೃವಾಗಲಾರನು. ಆತ್ಮನಲ್ಲಿ ದೇಹಾದಿಗಳ ಸಂಬಂಧವಿದೆಯೆಂದು ಕಲ್ಪಿಸಿಕೊಂಡ ಹೊರತು ಆತ್ಮನು ಪ್ರಮಾತೃವಾಗಲಾರನಾದ್ದರಿಂದಲೂ ಪ್ರಮಾತೃವಿಲ್ಲದೆ ಪ್ರಮಾಣವ್ಯವಹಾರವು ನಡೆಯುವಹಾಗಿಲ್ಲವಾದ್ದರಿಂದಲೂ ದೇಹಾದಿಗಳ ಸಂಬಂಧವನ್ನು ಕಲ್ಪಿಸಿಕೊಳ್ಳುವದೆಂಬ ಅಜ್ಞಾನವೇ ಸಕಲಪ್ರಮಾಣಗಳಿಗೂ ತಳಹದಿಯಾಗಿರುವದು. ಹೀಗಿರುವದರಿಂದ ಪ್ರಮಾಣಗಳು ಅಜ್ಞಾನಸ್ಥಿತಿಯಲ್ಲಿ ಸತ್ಯವಾಗಿರುವವೆಂದು ಹೇಳಿದ ಮಾತು ಒಣಮಾತಲ್ಲ. (ಅ. ಭಾ. ೨)

೧೨. ಪ್ರಮಾಣಗಳಾದ ಪ್ರತ್ಯಕ್ಷವೇ ಮುಂತಾದವುಗಳನ್ನೂ ಶಾಸ್ತ್ರವನ್ನೂ ಕೈಬಿಟ್ಟರೆ ನಿಜವನ್ನು ಅರಿತುಕೊಳ್ಳುವ ಸಾಧನವೇ ಬೇರೆ ಇರುವದಿಲ್ಲ. ಆಮೇಲೆ ನಿಜವನ್ನು ಅರಿಯುವದು ಹೇಗೆ? ಪ್ರಮಾಣವಾದ ಶಾಸ್ತ್ರವು ಕೂಡ ಅಜ್ಞಾನದಿಂದ ಸತ್ಯವಾಗಿರುವದರಿಂದ ಶಾಸ್ತ್ರದಿಂದುಂಟಾಗುವ ಬ್ರಹ್ಮವಿದ್ಯೆ ಎಂಬ ಜ್ಞಾನವು ಅಜ್ಞಾನವೇ ಆಗಿಬಿಡುವದಿಲ್ಲವೆ? ಆಗ ಬ್ರಹ್ಮವಿದ್ಯೆಯು ಸರಿಯೆಂದು ಹೇಗೆ ನಂಬಬೇಕು? ಎಂಬುದು ಹನ್ನೆರಡನೆಯ ಸಂಶಯವು.

ಆತ್ಮನು ತಾನೇ ಸಿದ್ಧವಾಗಿರುವದರಿಂದ ಇದನ್ನು ಅರಿಯುವದಕ್ಕೆ ಮತ್ತೆ ಯಾವ ಪ್ರಮಾಣವೂ ಬೇಕಿಲ್ಲವೆಂಬುದನ್ನು ಹಿಂದೆಯೇ ತಿಳಿಸಿದೆ. ಆತ್ಮನಲ್ಲದ್ದನ್ನು ಆತ್ಮನೆಂದು ತಿಳಿದುಕೊಂಡರೆ 'ಅದು ಆತ್ಮನಲ್ಲ' ಎಂದು ಶಾಸ್ತ್ರವು ಹೇಳುವದು; ಅಷ್ಟರಮಟ್ಟಿಗೆ ಶಾಸ್ತ್ರವು ಪ್ರಮಾಣವಾಗಿರುವದು. ಆದರೆ ಪ್ರಮಾಣಪ್ರಮೇಯವ್ಯವಹಾರವೂ ಅಜ್ಞಾನವೇ ಎಂಬುದನ್ನು ಶಾಸ್ತ್ರವು ಹೇಳಿಕೊಡುತ್ತದೆಯಾದ್ದರಿಂದ ಶಾಸ್ತ್ರದಿಂದ ಈ ತಿಳಿವಳಿಕೆಯುಂಟಾದಮೇಲೆ ಶಾಸ್ತ್ರವು ಕೂಡ ಪ್ರಮಾಣವಲ್ಲದೆಹೋಗುವದು. ಇದರಿಂದ ಅದರ ಪ್ರಾಮಾಣ್ಯಕ್ಕೆ ಯಾವ ಬಾಧಕವೂ ಇಲ್ಲ. ಹೀಗೆ ಪ್ರಮಾಣವ್ಯವಹಾರವೇ ತಪ್ಪುತಿಳಿವಳಿಕೆಯಿಂದ ಅದದ್ದೆಂದು ಶಾಸ್ತ್ರವು ತಿಳಿಸಿಕೊಡುವದರಿಂದ

ಶಾಸ್ತ್ರಕ್ಕೆ "ಅಂತ್ಯಪ್ರಮಾಣ" ಎಂಬ ಹೆಸರು ಸಲ್ಲುವದು. (ಸೂ ಭಾ. ೨-೧-೧೪, ಗೀ. ೨-೧೮, ಬೃ. ೪-೪-೨೦)

೩೬. 'ಮೋಕ್ಷಾದಿಗಳು ಸುಳ್ಳು, ಪ್ರಮಾಣವ್ಯವಹಾರವು ಅಜ್ಞಾನ ದೃಷ್ಟಿಯಲ್ಲಿ ಮಾತ್ರ ಸತ್ಯ, ಶಾಸ್ತ್ರವೂ ಅಜ್ಞಾನದೃಷ್ಟಿಯಲ್ಲಿಯೇ ಪ್ರಮಾಣವು' ಎಂದು ಹಂಡದ್ದನ್ನೆಲ್ಲ ಸುಳ್ಳೆನ್ನುವ ವಾದಕ್ಕಿಂತ 'ಪ್ರತ್ಯಕ್ಷಾದಿಗಳೂ ನಿಜ ; ಶಾಸ್ತ್ರವೂ ಪ್ರಮಾಣ ; ಬಂಧಾದಿಗಳೂ ನಿಜ ; ಶಾಸ್ತ್ರದಲ್ಲಿ ಹೇಳಿರುವಂತೆ ಸಾಧನಗಳನ್ನು ಮಾಡಿ ಬಂಧನನ್ನು ಕಳಚಿಕೊಂಡರೆ ಸತ್ಯವಾದ ಮೋಕ್ಷವು ಜೀವರಿಗೆ ಸಿಕ್ಕುವದು'- ಎನ್ನುವ ವಾದವೇ ಮೇಲಲ್ಲವೆ ? ಎಂಬುದು ಹದಿಮೂರನೆಯ ಸಂಶಯವು.

ಬಂಧವು ಸತ್ಯವಾಗಿದ್ದರೆ ಅದನ್ನು ಜ್ಞಾನವು ಎಂದಿಗೂ ಕಳೆಯ ಲಾರದು. ಯಾವ ಸಾಧನನೇ ಆಗಲಿ ಪ್ರಾಪ್ಯವಾಗಿರುವ ಫಲವನ್ನು ಕೊಟ್ಟೀತೇಹೊಸತು ಸತ್ಯವಸ್ತುವನ್ನು ನಾಶಪಡಿಸಲಾರದು ವಸ್ತು ವಿನ ಪರಮಾರ್ಥರೂಪವನ್ನು ಮಾರ್ಪಡಿಸಲೂ ಆರದು. ಹೊಸದಾಗಿ ಪಡೆದದ್ದನ್ನು ನಿತ್ಯವಾಗಿಸಲೂ ಆರದು. ಇದನ್ನು ನೆನಪಿನಲ್ಲಿಟ್ಟರೆ ಬಂಧವು ಸತ್ಯವಾಗಿರಬೇಕೆಂಬ ಅಭಿಮಾನವು ಹಾರಿಹೋಗುವದು. (ಬೃ. ೪-೪-೬)

೩೭. ನಿಜವಾಗಿರುವ ಬಂಧವನ್ನು ಕಡಿದುಹಾಕಿ ನಿಜವಾಗಿರುವ ಮೋಕ್ಷವನ್ನು ಪಡೆಯಬೇಕೆಂಬ ವಾದವು ನಿಲ್ಲುವದಿಲ್ಲ. ಏಕೆಂದರೆ ಪರಮಾತ್ಮನಿಗಿಂತ ಬೇರೆಯಾಗಿ ಬಂಧಕ್ಕೆ ಸಿಕ್ಕಿರುವನೆಂಬ ಜೀವನು ಯಾರೂ ಇರುವದಿಲ್ಲ. ಜೀವನು ಈಗ ನಿಜವಾಗಿ ಬದ್ಧನಾಗಿದ್ದು ಆಮೇಲೆ ಮುಕ್ತ ರೂಪವನ್ನು ಪಡೆಯುತ್ತಾನೆಂದು ಹೇಳಿದರೆ ಹೊಸದಾಗಿ ಉಂಟಾಗುವ ಮುಕ್ತಿಯು ಅನಿತ್ಯವೆಂದಾಗುವದು. ಆತ್ಮನಿಗೆ ಏನಾದರೂ ಸಂಸ್ಕಾರ ವನ್ನುಂಟುಮಾಡಿಕೊಂಡ ಮೇಲೆ ಮುಕ್ತಿಯಾಗುವದೆಂದೂ ತಿಳಿಯಬಾರದು. ಏಕೆಂದರೆ ಗುಣವನ್ನುಂಟುಮಾಡುವದೂ ದೋಷವನ್ನು ತೆಗೆದುಹಾಕುವದೂ ಸಂಸ್ಕಾರವೆನಿಸುವದು. ಆದರೆ ಆತ್ಮನಲ್ಲಿಲ್ಲದ ಅವನಿಗಿಂತ ಬೇರೆಯಾದ ಗುಣವು ಯಾವದೂ ಇರುವದಿಲ್ಲ; ಆತ್ಮನಲ್ಲಿ ಯಾವ ದೋಷವೂ ಇರುವದಿಲ್ಲ.

ಆದ್ದರಿಂದ ಸಂಸ್ಕಾರದಿಂದ ಮೋಕ್ಷವು ಬರುವದೆಂಬುದು ಸರಿಯಲ್ಲ. ಬ್ರಹ್ಮವು ಒಂದು ಕಡೆ ಇರುವದೆಂದೂ ಅದನ್ನು ನಾವು ಅಲ್ಲಿಗೆ ಹೋಗಿ ಪಡೆಯಬೇಕೆಂದೂ ತಿಳಿಯುವದು ಕೂಡ ತಪ್ಪೇ ; ಏಕೆಂದರೆ ಬ್ರಹ್ಮವು ಸರ್ವವ್ಯಾಪಿಯಾದ್ದರಿಂದ ಅದನ್ನು ಹೊಸದಾಗಿ ಪಡೆಯಬೇಕಾದದ್ದೇನೂ ಇರುವದಿಲ್ಲ. (ಸೂ. ಭಾ. ೧-೧-೪, ಗೀ. ೧೮-೬೬, ಬೃ. ४-४-೬)

೩೮. ಮೋಕ್ಷವು ಮತ್ತೆ ಯಾವ ಸಾಧನದಿಂದಲೂ ಉಂಟಾಗುವದಿಲ್ಲವೆಂದು ಹೇಳಿದರೂ ಜ್ಞಾನವಾದ ಮೇಲೆಯೇ ಅದು ಉಂಟಾಗುವದೆಂದು ಅವಶ್ಯವಾಗಿ ಒಪ್ಪಬೇಕು. ಆದ್ದರಿಂದ ಮೋಕ್ಷವೆಂಬುದು ಜ್ಞಾನದ ಕಾರ್ಯವೇ ಆಯಿತು. ಕಾರ್ಯವೆಲ್ಲ ಅನಿತ್ಯವಾದರೆ ಜ್ಞಾನಕಾರ್ಯವಾದ ಮೋಕ್ಷವೂ ಅನಿತ್ಯವೇ ಆಗಬೇಕಾಗುವದಲ್ಲ ! ಎಂಬಂದು ಹದಿನೈದನೆಯ ಸಂಶಯವು.

**ಮೋಕ್ಷವು ಜ್ಞಾನದಿಂದ ಉಂಟಾಗುವದಿಲ್ಲ, ಇದ್ದ ಮೋಕ್ಷವೇ ಜ್ಞಾನದಿಂದ ತಿಳಿಯುತ್ತದೆ.** ಸರಿಯಾದ ತಿಳಿವಳಿಕೆಯೆಂದರೆ ಇದ್ದದ್ದನ್ನು ತಿಳಿಸುವ ಜ್ಞಾನವೇ ಹೊರತು ಇಲ್ಲದ್ದನ್ನು ಉಂಟುಮಾಡುವ ಶಕ್ತಿಯಲ್ಲ. ಆದ್ದರಿಂದ ಮೋಕ್ಷವು ನಿತ್ಯಸಿದ್ಧವಾಗಿದ್ದು **ಜ್ಞಾನದಿಂದ ಗೊತ್ತಾಗುವದರಿಂದ ಇದನ್ನು ಜ್ಞಾನದ ಕಾರ್ಯವೆಂದು ಉಪಚಾರಕ್ಕೆ ಕರೆಯುವರೆಂದು ತಿಳಿಯಬೇಕು.** (ಪ್ರಾಂ. ೭. ಸೂ. ಭಾ. ೧-೧-४, ಬೃ. ೩-೩-೧)

೩೯. ಆತ್ಮನಿಗಿಂತ ಬೇರೆಯಾದ ಬ್ರಹ್ಮವಿಲ್ಲವಾದರೆ ಬ್ರಹ್ಮವೇ ಸಂಸಾರಿಯೆಂದಾಗುವದಲ್ಲ ! ಇದಕ್ಕೇನು ಗತಿ ? ಎಂಬುದು ಹದಿನಾರನೆಯ ಸಂಶಯವು.

**ಸಂಸಾರವು ನಿಜವಾಗಿ ಯಾರಿಗೂ ಇರುವದಿಲ್ಲವೆಂಬುದೇ** ಸಿದ್ಧಾಂತವು. ಆತ್ಮನು ಬ್ರಹ್ಮವೇ ಎಂದೂ ಇವನಲ್ಲಿ ಯಾವ ಸಂಸಾರವೂ ಇರುವದಿಲ್ಲವೆಂದೂ ಅನುಭವವನ್ನನುಸರಿಸಿ ತೋರಿಸಿಕೊಟ್ಟಿರುವದರಿಂದ ಬ್ರಹ್ಮವು ಸಂಸಾರಿಯೆನ್ನುವದು ಎಂದಿಗೂ ಸರಿಯಾಗುವದಿಲ್ಲ. ಆದ್ದರಿಂದ ಸಂಸಾರವಿದೆ ಎಂಬುದೇ ಅಜ್ಞಾನವು. (ಸೂ. ಭಾ. ೧-೨-೮, ಗೀ. ೧೩-೨)

೪೦. ಹಾಗಾದರೆ ಆತ್ಮನಿಗೆ ಅಜ್ಞಾನವಿರಬೇಕಾದ್ದರಿಂದ ಬ್ರಹ್ಮಕ್ಕೆ ಅಜ್ಞಾನವಿದೆಯೆಂದಾಯಿತಲ್ಲ! ಅಜ್ಞಾನವುಳ್ಳ ಬ್ರಹ್ಮವನ್ನು ಅರಿಯುವದರಿಂದ ನಮಗೆ ಆಗಬೇಕಾದದ್ದಾದರೂ ಏನು? ಎಂಬುದು ಹದಿನೇಳನೆಯ ಸಂಶಯವು.

ಇದಕ್ಕೆ ಪರಿಹಾರವೇನೆಂದರೆ: ಆತ್ಮನು ಅವಿದ್ಯೆಯನ್ನು ತನ್ನ ಜ್ಞಾನಕ್ಕೆ ವಿಷಯವಾಗಿ ಅರಿಯುತ್ತಾನೆ : ಆದ್ದರಿಂದ ಆತ್ಮನಿಗಿಂತ ಅಜ್ಞಾನವು ಬೇರೆ ಯೆಂದೇ ಆಗುವದೇ ಹೊರತು ಅದು ಆತ್ಮನ ಧರ್ಮವೆಂದಾಗುವದಿಲ್ಲ. ಗಡಿಗೆಯನ್ನು ಅರಿಯುವವನಲ್ಲಿ ಆ ಗಡಿಗೆಯ ಧರ್ಮಗಳೂ ಇರುವವೆನ್ನ ಬಹುದೆ ? ಕೂಡದು. ಇದರಂತೆ ಅವಿದ್ಯಾದಿಗಳೆಲ್ಲವೂ ಅನಾತ್ಮವೇ ಹೊರತು ಆತ್ಮವಲ್ಲ. ಆತ್ಮಸ್ವರೂಪವಾದ ಚೈತನ್ಯದಲ್ಲಿ ಯಾವ ಅವಿದ್ಯೆಯೂ ಇರುವದಿಲ್ಲ. ಸುಷುಪ್ತಿ, ಸಮಾಧಿ- ಮುಂತಾದ ಅನುಭವಗಳಿಂದ ಈ ಸ್ವರೂಪವನ್ನು ಮ ನ ಗಾ ಣ ಬ ಹು ದೆಂ ದು ಹಿಂದೆ ಹೇಳಿಯೂ ಇದೆ. (ಬೃ. ೪-೪-೬, ಗೀ. ೧೩-೨)

೪೧. ಹಾಗಾದರೆ ಅಜ್ಞಾನವೂ ಯಾರಿಗೂ ಇಲ್ಲ, ಸಂಸಾರವೂ ಯಾರಿಗೂ ಇಲ್ಲ-ಎಂದಾಯಿತಷ್ಟೆ ? ಇನ್ನು ಶಾಸ್ತ್ರದಿಂದಲಾದರೂ ಆಗಬೇಕಾದದ್ದೇನು ? ಎಂಬುದು ಹದಿನೆಂಟನೆಯ ಸಂಶಯವು.

ಅಜ್ಞಾನವಾಗಲಿ ಸಂಸಾರವಾಗಲಿ ಯಾರಿಗೂ ಇಲ್ಲವೆಂದೂ ನಮ್ಮ ಆತ್ಮನು ನಿತ್ಯಶುದ್ಧಬುದ್ಧಮುಕ್ತಸ್ವರೂಪನೆಂದೂ ತಿಳಿದಮೇಲೆ ಶಾಸ್ತ್ರದಿಂದ ಆಗಬೇಕಾದದ್ದೇನೂ ಇರುವದೇ ಇಲ್ಲ. ಇದನ್ನು ತಿಳಿಯದವರೆಗೆ ಮಾತ್ರ ಶಾಸ್ತ್ರವು ಬೇಕಾಗುವದು. (ಬೃ. ೧-೪-೧೦, ಸೂ.ಭಾ. ೪-೧-೩)

೪೨. ಇಂಥ ಬ್ರಹ್ಮವಿದ್ಯೆಯಿಂದ ಆಗಬೇಕಾದದ್ದೇನು ? ಬ್ರಹ್ಮಜ್ಞಾನಿಗಳೆಂಬವರೂ ಮಿಕ್ಕ ಎಲ್ಲರಂತೆಯೇ ಸಂಸಾರಿಗಳಾಗಿಯೇ ಇರುವರಲ್ಲ ! ಎಂಬುದು ಹತ್ತೊಂಬತ್ತನೆಯ ಸಂಶಯವು.

ನಿತ್ಯಶುದ್ಧಬುದ್ಧಮುಕ್ತಸ್ವರೂಪನಾದ ಬ್ರಹ್ಮವೇ ತಾನೆಂದು ಅರಿತ ಜ್ಞಾನಿಯು ತಾನು ಕರ್ಮವನ್ನು ಮಾಡಿ ಫಲವನ್ನು ಅನುಭವಿಸುವ ಸಂಸಾರಿಯೆಂದು ತಿಳಿದಿರುವನೆಂಬುದು ಹಾಸ್ಯಾಸ್ಪದವಾದ ಮಾತು. ಏಕೆಂದರೆ

ಶರೀರವೇ ಮುಂತಾದವುಗಳು ತಾನೆಂದು ತಿಳಿದಿರುವಾತನಿಗೆ ಶರೀರಾದಿಗಳಿಗೆ ಅನುಕೂಲವಾಗಬೇಕೆಂಬ ಆಶೆ, ಅವಕ್ಕೆ ಪ್ರತಿಕೂಲವಾಗಿರುವದರಲ್ಲಿ ದ್ವೇಷ, ಅವು ಎಲ್ಲಿ ನಾಶವಾಗಿಬಿಡುವವೋ, ಅವಕ್ಕೆಲ್ಲಿ ತೊಂದರೆ ಬರುವದೊ– ಎಂಬ ಭಯ, ಅವುಗಳನ್ನು ಹೇಗಾದರೂ ಕಾಪಾಡಿಕೊಳ್ಳಬೇಕೆಂಬ ಮೋಹ– ಇವೇ ಮುಂತಾದ ಅನರ್ಥಗಳು ಒಂದರ ಹಿಂದೊಂದು ಒದಗುತ್ತಿರುವವು. ಇದು ಸಂಸಾರಿಗಳಿಗೆಲ್ಲರಿಗೂ ತಿಳಿದಿರುವ ವಿಷಯವಾಗಿದೆ. ಈ ಅನರ್ಥಗಳ ಗುಂಪೇ ಸಂಸಾರವೆನಿಸುವದು. ಆದರೆ ಈ ದೇಹಾದಿಗಳು ತಾನಲ್ಲವೆಂದೂ ಅವು ಪರಮಾರ್ಥವಾಗಿ ಇರುವದೇ ಇಲ್ಲವೆಂದೂ ತನ್ನ ಸ್ವರೂಪವು ನಿತ್ಯವಾಗಿಯೂ ಶುದ್ಧವಾಗಿಯೂ ಜ್ಞಾನಸ್ವರೂಪವಾಗಿಯೂ ಯಾವ ಬಂಧವೂ ಇಲ್ಲದ್ದಾಗಿಯೂ ಇರುವದೆಂದೂ ಅರಿತುಕೊಂಡಾತನಿಗೆ ಮೇಲೆ ಹೇಳಿದಂಥ ಸಂಸಾರವು ಇರುವದೆಂದರೆ ಒಪ್ಪಬಹುದೆ? ಆದ್ದರಿಂದ ಸಂಸಾರದ ಸಕಲ ವಿಧವಾದ ಅನರ್ಥಗಳೂ ಇಲ್ಲವಾಗುವದು ಬ್ರಹ್ಮವಿದ್ಯೆಗೆ ಒಂದು ಪ್ರಯೋಜನವು. ಜ್ಞಾನಿಯಾದವನು ತನಗಾಗಿ ಮಾಡಿಕೊಳ್ಳಬೇಕಾದದ್ದು ಏನೂ ಇರುವದಿಲ್ಲ; ಬಿಡಬೇಕಾದದ್ದೂ ಏನೂ ಇರುವದಿಲ್ಲ. ಇದರಿಂದ ಅವನು ಮಿಕ್ಕವರ ಹಾಗೆ ತಲ್ಲಣಗೊಳ್ಳದೆ ಶಾಂತನಾಗಿರುವನು. ಈ ಪರಮ ಶಾಂತಿಯು ಬ್ರಹ್ಮವಿದ್ಯೆಗೆ ಮತ್ತೊಂದು ಪ್ರಯೋಜನವು. (ಸೂ.ಭಾ. ೧–೧–೪, ಗೀ. ೩–೧೭)

೪೩. ಈ ಬ್ರಹ್ಮಜ್ಞಾನವು ಎಲ್ಲರಿಗೂ ಉಂಟಾಗುವದಿಲ್ಲವಲ್ಲ! ಇದೇ ನಿಜವಾದ ತಿಳಿವಳಿಕೆಯಾದರೆ ಎಲ್ಲರಿಗೂ ಹೀಗೆಯೇ ತೋರಬಾರದೇಕೆ? ಈ ವಿಷಯದಲ್ಲಿ ಜನರು ಚರ್ಚೆಮಾಡುತ್ತಿರುವದೇಕೆ? ಎಂಬುದು ಇಪ್ಪತ್ತನೆಯ ಸಂಶಯವು.

ಈ ಜ್ಞಾನವು ಎಲ್ಲರಿಗೂ ಆಗುವದಿಲ್ಲವೆಂಬುದು ನಿಜವೇ. ಅವರು ತಮಗೆ ಅದು ಅವಶ್ಯವಾಗಿ ಬೇಕೆಂದು ಹಾತುವರಿಯದಿರುವದೇ ಇದಕ್ಕೆ ಕಾರಣವು. ದುರಭಿಮಾನವನ್ನು ಬಿಟ್ಟು ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ ಸಮಾಧಾನ–ಎಂಬ ಸಾಧನಗಳನ್ನು ಅಳವಡಿಸಿಕೊಂಡು ವೇದಾಂತ ಶಾಸ್ತ್ರದಲ್ಲಿ ಹೇಳಿರುವಂತೆ ಬ್ರಹ್ಮನಿಷ್ಠರಾದ ಗುರುಗಳ ಉಪದೇಶ

ವನ್ನು ಹೊಂದಿ ಅದನ್ನೇ ಕುರಿತು ಆಲೋಚಿಸಿ ನೋಡಿದರೆ ಅವಶ್ಯವಾಗಿ ಜ್ಞಾನವುಂಟಾಗುತ್ತದೆ. (ಸೂ.ಭಾ. ೧-೧-೧,ಗೀ,೨೧-೧೮-೫೦)

೪೪. ಬ್ರಹ್ಮಜ್ಞಾನದಿಂದ ನಮ್ಮ ಜ್ಞಾನವು ತಪ್ಪೆಂದು ತಿಳಿಯುವಂತೆ ಬ್ರಹ್ಮಜ್ಞಾನಕ್ಕಿಂತ ಪ್ರಬಲವಾದ ಮತ್ತೊಂದು ಜ್ಞಾನದಿಂದ ಅದೂ ತಪ್ಪೆಂದು ತಿಳಿಯಬಾರದೇಕೆ ? ಅದೇ ಸರಿಯಾದ ತಿಳಿವಳಿಕೆಯೆಂದು ನಿಶ್ಚಯಿಸುವದು ಹೇಗೆ ? ಎಂಬುದು ಇಪ್ಪತ್ತೊಂದನೆಯ ಸಂಶಯವು.

ಆತ್ಮನೊಬ್ಬನೇ ಪರಮಾರ್ಥವೆಂಬುದೇ ಬ್ರಹ್ಮಜ್ಞಾನವು. ಈ ಬ್ರಹ್ಮಜ್ಞಾನವುಂಟಾದರೆ ಅದನ್ನು ಹೋಚೆಯುಂದಕ್ಕೆ ಎರಡನೆಯ ವಸ್ತುವೇ ಇರುವದಿಲ್ಲವಾದ್ದರಿಂದ ಬ್ರಹ್ಮಜ್ಞಾನವನ್ನು ಬಾಧಿಸುವ ಎರಡನೆಯ ಜ್ಞಾನವುಂಟಾಗಬಹುದೆಂಬ ಶಂಕೆಗೆ ಅವಕಾಶವೇ ಇರುವದಿಲ್ಲ. ಇದೇ ಕಡೆಯ ಜ್ಞಾನವು. ಇದರ ಮುಂದೆ ಸಂಶಯವಾಗಲಿ ಪ್ರಮಾಣಜ್ಞಾನವಾಗಲಿ ಉಂಟಾಗುವದಿಲ್ಲ. (ಮಾ. ಕಾ. ೧-೧೮, ಸೂ. ಭಾ. ೨-೧-೧೪)

೪೫. ದರ್ಶನಕಾರರೆಲ್ಲ ತಮ್ಮತಮ್ಮ ಸಿಂದ್ಧಾಂತವೇ ಸರಿಯೆಂದು ಬಗೆಬಗೆಯ ಯುಕ್ತಿಗಳಿಂದ ತೋರಿಸುತ್ತಿರುವರು ; ಶಾಸ್ತ್ರವಾಕ್ಯಗಳನ್ನೂ ಅವರು ಉದಾಹರಿಸುತ್ತಿರುವರು. ಹೀಗಿರುವಲ್ಲಿ ಆ ದರ್ಶನಗಳು ಸರಿಯಲ್ಲವೆಂದು ಹೇಗೆ ಹೇಳುವದು ? ಎಂಬಂದು ಕೊನೆಯ ಸಂಶಯವು.

ಮಿಕ್ಕ ದರ್ಶನಕಾರರು ಹೇಳುವ ಎಷ್ಟೋ ವಿಷಯಗಳು ಯುಕ್ತಿ ಪ್ರಮಾಣಗಳಿಲ್ಲದೆ ಇರುವ ಬರಿಯ ಕಲ್ಪನೆಗಳಾಗಿವೆ. ಜನರು ಅವನ್ನು ಒಪ್ಪಬೇಕಾಗಿರುವದೇ ಹೊರತು ಅವುಗಳು ಈ ಲೋಕದಲ್ಲಿ ಅನುಭವಕ್ಕೆ ಬರುವದು ಶಕ್ಯವಿಲ್ಲ. ಅವರು ಹೇಳುವ ಮುಕ್ತಿಯೆಂಬ ಪರಮಪ್ರಯೋಜನವು ಕಾಲಾಂತರದಲ್ಲಿ ಲೋಕಾಂತರದಲ್ಲಿ ಜನರು ಸತ್ತ ಮೇಲೆ ಕಾಣುವದಾಗಿದೆ-ಎಂದು ಅವರು ಹೇಳುತ್ತಿರುವದರಿಂದ ಅದನ್ನೂ ನಂಬಬೇಕಾಗಿದೆಯೇ ಹೊರತು ಅದು ಈಗ ಅನುಭವಕ್ಕೆ ಬರುವಹಾಗಿಲ್ಲ. ಅವರು ಹೇಳುವ ವಿಷಯಗಳಲ್ಲಿ ಕೆಲವೇನೋ ಅನುಭವಕ್ಕೆ ಬರುವಹಾಗಿವೆ, ನಿಜ; ಆದರೆ ಅವು ಜನರ ಅನುಭವದ ಒಂದಂಶವಾದ ಎಚ್ಚರದವಸ್ಥೆಯ ಅನುಭವವನ್ನು ಮಾತ್ರ ಲೆಕ್ಕಕ್ಕೆ

ತೆಗೆದುಕೊಂಡರೆ ತೋರುವವುಗಳಾಗಿವೆ. ಬ್ರಹ್ಮಾತ್ಮಸ್ವರೂಪವನ್ನು ಹೇಳುವ ವೇದಾಂತದರ್ಶನವು ಹಾಗಲ್ಲ. ಇಲ್ಲಿಯೇ ಜ್ಞಾನವು ಬಂದಕೂಡಲೆ ಆತ್ಮ ಸ್ವರೂಪದ ಸಾಕ್ಷಾತ್ಕಾರವಾಗುವದೆಂದು ಆ ಶಾಸ್ತ್ರವು ಹೇಳುವದು. ಈಗಲೇ ಅನುಭವಕ್ಕೆ ಬರಬಹುದಾಗಿರುವ ವಿಷಯವನ್ನು ಹೇಳುವದಕ್ಕೆ ಹೊರಟಿರುವ ಈ ದರ್ಶನದ ಸಿದ್ಧಾಂತವನ್ನು ಎಲ್ಲರೂ ಪರೀಕ್ಷಿಸಬಹುದಾಗಿದೆ. ಎಚ್ಚರ, ಕನಸು, ನಿದ್ರೆ- ಎಂಬ ಎಲ್ಲಾ ಅನುಭವಗಳನ್ನೂ ಇಲ್ಲಿ ಲೆಕ್ಕಕ್ಕೆ ತೆಗೆದುಕೊಂಡು ನೋಡಿ ಪರಮಾರ್ಥವಾಗಿಯೂ ಸತ್ಯವಾಗಿರುವ ವಸ್ತುವು ಯಾವದೆಂಬುದನ್ನು ಮನಗಾಣಬಹುದಾಗಿದೆ. ಯಾವ ಯುಕ್ತಿಗೂ ಯಾವ ಶಾಸ್ತ್ರಕ್ಕೂ ಇದು ವಿರೋಧವಾಗಿಲ್ಲ. ಹೀಗೆ ಮಿಕ್ಕ ದರ್ಶನಗಳೆಲ್ಲಕ್ಕಿಂತಲೂ ವೇದಾಂತದರ್ಶನದಲ್ಲಿ ಹೆಚ್ಚುಗಾರಿಕೆಯಿರುವದು. (ಸೂ. ಭಾ೧-೧-೪, ಮಾಂ. ಕಾ. ೪-೨)

೪೬. ಈ ಬ್ರಹ್ಮವಿದ್ಯೆಯೆಂಬುದು ಹೀಗೆ ಎಲ್ಲಕ್ಕೂ ಹೆಚ್ಚಿನ ಪ್ರಯೋಜನವುಳ್ಳ ತಿಳಿವಳಿಕೆಯಾದ್ದರಿಂದ ಬುದ್ಧಿವಂತರೂ ಮುಮುಕ್ಷುಗಳೂ ಆಗಿರುವ ಜಿಜ್ಞಾಸುಗಳು ಇದನ್ನೇ ಆದರಿಸುತ್ತಾರೆ. ಈ ವಿದ್ಯೆಯಿಂದ ಬ್ರಹ್ಮಾತ್ಮದ ಸ್ವರೂಪವನ್ನು ಕಂಡುಕೊಂಡರೆ ಸಕಲಸಂಶಯಗಳೂ ಪರಿಹಾರವಾಗುತ್ತವೆ ; ಹೃದಯದಲ್ಲಿರುವ ತಪ್ಪುತಿಳಿವಳಿಕೆಯಿಂದ ಉಂಟಾಗಿರುವ ಬಯಕೆಗಳ ತೊಡಕು ಬಿಚ್ಚಿಕೊಳ್ಳುತ್ತದೆ; ಯಾವದೊಂದನ್ನು ಪಡೆದುಕೊಳ್ಳುವದಕ್ಕಾಗಲಿ, ಯಾವದೊಂದನ್ನು ತಪ್ಪಿಸಿಕೊಳ್ಳುವದಕ್ಕಾಗಲಿ ಮತ್ತೆ ಮಾಡಬೇಕಾದ ಕೆಲಸಗಳೇನೂ ಇರುವದಿಲ್ಲ. (ಮು.೨-೨-೯, ಮು. ೩-೨-೯)

ಓಂ ತತ್ಸತ್

2000, 16-3-95, ಅಧ್ಯಾತ್ಮಪ್ರಕಾಶಮುದ್ರಣಾಲಯ, ಹೊಳೆನರಸೀಪುರ

